# ವೇದಾಂತ: ಕೆಲವು ವಿಚಾರಗಳು



ವೈ. ಸುಬ್ರಾಯಶರ್ಮ

ನೆಲಮಂಗಲ — ೫೬೨೧೨೩
ವಿಶ್ವೇಶ್ವರ ಪುರ
ವಿಚಾರ ಪ್ರಕಾಶನ




## ಎರಡು ಮಾತು

ದಿವಂಗತ ಎಡತೊರೆ ಸುಬ್ರಾಯಶರ್ಮರ ಈ ಕೃತಿಯನ್ನು ಪ್ರಕಟಿಸುವುದರ ಮೂಲಕ ಒಂದು ರೀತಿಯ ಧನ್ಯಾತ್ಮತೆ ಉಂಟು! ಈ ಪುಸ್ತಕ ಎಂದೋ ಹೊರಬರಬೇಕಿತ್ತು. ಅನೇಕ ತಾಂತ್ರಿಕ ದೋಷಗಳಿಂದ ಈ ಪುಸ್ತಕ ಈಗ ಹೊರಬರುತ್ತಿದೆ ಇದಕ್ಕೆ ಕೃತಜ್ಞತೆಯನ್ನು ಸೂಚಿಸುತ್ತೇನೆ.

ವೇದಾಂತ ಹಾಗೂ ವೇದದೊಳಗಿನ ನಿಗೂಢ ವಾದ ವಿಚಾರಗಳನ್ನು ಹೆಕ್ಕಿ ಅದರ ಸ್ವಸ್ವರೂಪ ದರ್ಶನ ಮಾಡಿಸುವ ಕೃತಿಗಳು ಈಗ ವಿರಳವಾಗಿ ರುವ ಈ ಸಮಯದಲ್ಲಿ ಸುಬ್ರಾಯಶರ್ಮರ ಈ ಕೃತಿ ಅನನ್ಯಶ್ರದ್ಧೆ ಹಾಗೂ ಅನನ್ಯ ವಿಚಾರಗಳಿಂದ ಚಿಂತನಪರ ವ್ಯಕ್ತಿಗಳನ್ನು ತನ್ನತ್ತ ಗಮನ ಸೆಳೆಯುತ್ತದೆ.

ಕೃತಿಪ್ರಕಟಣೆಯಲ್ಲಿ ಸಹಕರಿಸಿದ ನನ್ನಗೆಳೆಯರ ವೃಂದಕ್ಕೂ ಅದರಲ್ಲೂ ನನ್ನ ಕೈಹಿಡಿದು ನಡೆಸು ತ್ತಿರುವ ಜಿ. ಕೃಷ್ಣಮೂರ್ತಿಯನ್ನು ಸ್ಮರಿಸುವುದು ನನ್ನ ಕರ್ತವ್ಯ.

ಹಿರಿಯಸ್ನೇಹಿತರೊಬ್ಬರು ಹೆಜ್ಜೆ ಹೆಜ್ಜೆಗೂ ನೆರವಾಗಿದ್ದಾರೆ. ಅವರಿಗೆ ಮನಪೂರ್ವಕ ವಂದನೆ ಸೂಚಿಸುತ್ತೇನೆ.

20-4-79

—ಮಲ್ಲೇಪುರಂ ಜಿ. ವೆಂಕಟೇಶ

ಬೆಂಗಳೂರು 560021

ನೆಲಮಂಗಲ — ೫೬೨೧೨೩

ವಿಶ್ವೇಶ್ವರ ಪುರ

ವಿಚಾರ ಪ್ರಕಾಶನ

ವೈ. ಸುಬ್ರಾಯಶರ್ಮ

# ವೇದಾಂತ: ಕೆಲವು ವಿಚಾರಗಳು





ಶ್ರೀ

# ನಾಲಕ್ಕು ವೇದಗಳ ಮಹಾವಾಕ್ಯಗಳಾದ ಪ್ರಜ್ಞಾನಂಬ್ರಹ್ಮ, ಅಹಂಬ್ರಹ್ಮಾಸ್ಮಿ, ತತ್ವಮಸಿ, ಅಯಮಾತ್ಮಾಬ್ರಹ್ಮ ಎಂಬವುಗಳ ತತ್ವವಿಚಾರ

## ಪೀಠಿಕೆ

ನಾಲಕ್ಕು ವೇದಗಳ ಮಹಾವಾಕ್ಯಗಳಾದ ಋಗ್ವೇದದ ಪ್ರಜ್ಞಾನಂಬ್ರಹ್ಮ, ಯಜುರ್ವೇದದ ಅಹಂಬ್ರಹ್ಮಾಸ್ಮಿ, ಸಾಮವೇದದ ತತ್ವಮಸಿ, ಅಥರ್ವಣವೇದದ ಅಯಮಾತ್ಮಾಬ್ರಹ್ಮ ಎಂಬವುಗಳ ತತ್ವಗಳನ್ನು ಒಟ್ಟುಗೂಡಿಸಿ ಹೊರಸೂಸುವ ಫಲಿತಾಂಶದ ತತ್ವವನ್ನು ಬರೆದು ತಿಳಿದುಕೊಳ್ಳಬೇಕೆಂದು ಅಂತರಾತ್ಮನ ಪ್ರೇರಣೆಯಾಗಿ ಬರೆಯಲು ಪ್ರಾರಂಭಿಸಿದಾಗ ವೇದಗಳ ಮಹಾವಾಕ್ಯಗಳಿಗೆ ಸಂಬಂಧಪಡುವ ಐತರೇಯೋಪನಿಷತ್ತಿನ ಕೆಲವು ವಿಚಾರಗಳನ್ನು ಪ್ರಥಮದಲ್ಲಿ ಬರೆದು ಅನಂತರ ಮಹಾವಾಕ್ಯಗಳ ತತ್ವಗಳನ್ನು ಬರೆಯುವುದು ಉತ್ತಮವೆಂದು ಭಾಸವಾಗಿ ಅದರಂತೆ ಐತರೇಯೋಪನಿಷತ್ತಿನ ಕೆಲವು ತತ್ವಗಳನ್ನು ಬರೆದು ಅನಂತರ ನಾಲಕ್ಕು ಮಹಾವಾಕ್ಯಗಳ ತತ್ವಗಳನ್ನು ಒಂದಕ್ಕೊಂದು ಹೊಂದಿಸಿಕೊಂಡು ಬರೆದಿರುವುದು. ಹೀಗೆ ಬರೆದಿರುವುದರಲ್ಲಿ ವೇದಾಂತದ ಸಕಲ ಸಾರವೂ ಬರುವುದು. ಮಹಾವಾಕ್ಯಗಳ ತತ್ವಗಳನ್ನು ಭಗವದ್ಗೀತಾ ವಾಕ್ಯಗಳಿಗೂ ಅನ್ವಯಿಸಿ ಬರೆದಿರುವುದು. ಅನಂತರ ಕೊನೆಯಲ್ಲಿ ಐತರೇಯೊಪನಿಷತ್ತಿನ ಕೆಲವು ಮಂತ್ರಗಳ ತತ್ವಗಳನ್ನು ಬರೆದು ಮಹಾವಾಕ್ಯಗಳ ತತ್ವಗಳೊಡನೆ ಸಮನ್ವಯ ಮಾಡಿ ಬರೆದಿರುವುದರಿಂದ ತತ್ವಗಳನ್ನು ಚೆನ್ನಾಗಿ ತಿಳಿಯಲು ಅನುಕೂಲವಾಗಿರುವುದು.

ವೇದ ಎಂದರೇನು, ಇದಕ್ಕೆ ಮೂಲವ್ಯಾವುದು, ಈ ಮಹಾವಾಕ್ಯಗಳಿರಲು ಕಾರಣವೇನು ಎಂಬ ವಿಚಾರಗಳನ್ನು ಕೊಂಚ ವಿವರಿಸೋಣ. ವೇದವೆಂದರೆ ಜ್ಞಾನ. ಯಾವುದರ ಜ್ಞಾನವೆಂದರೆ ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಲಯಗಳ ಸಕಲ ಕಾರ್ಯಗಳ ಜ್ಞಾನ. ಒಬ್ಬ ಚಿತ್ರಗಾರನು ಬರೆಯುವ ಚಿತ್ರದ ಜ್ಞಾನವೆಲ್ಲಾ ಅವನಲ್ಲಿ ಭಾವರೂಪವಾಗಿ ಪ್ರಥಮದಲ್ಲಿ ಇರುವುವು. ನಂತರ ಚಿತ್ರವನ್ನು ಬರೆಯುವ ಕಾರ್ಯ ಮಾಡುತ್ತಾನಷ್ಟೆ. ಇದರಂತೆ ಬ್ರಹ್ಮಾಂಡದ ಸೃಷ್ಟಿ ಸ್ಥಿತಿ ಲಯಗಳ ಸಕಲ ಕಾರ್ಯಗಳ ಜ್ಞಾನವು ಮೂಲತಃ ಜ್ಞಾನರೂಪನಾದ ಪರಮಾತ್ಮನಲ್ಲಿ ಅಭೇದದಿಂದ ಅಡಗಿತ್ತು.

'ಓಂಕಾರ ಪ್ರಭವಾ ವೇದಾಃ' ಎಂಬ ಶ್ರುತಿ ಪ್ರಮಾಣದಂತೆ ಓಂಕಾರರೂಪನಾದ ಪರಮಾತ್ಮನಿಂದ ವೇದಗಳು ಉದಯಿಸಿದವು. ಹೇಗೆ ಉದಯಿಸಿದವೆಂದರೆ–

**ಆಯಾತು ವರದಾದೇವಿ ಅಕ್ಷರಂ ಬ್ರಹ್ಮಸಮ್ಮಿತಂ।**
**ಗಾಯತ್ರೀಂ ಛಂದಸಾಂ ಮಾತೇದಂ ಬ್ರಹ್ಮ ಜುಷಸ್ವಮೇ॥**

ಎಂಬ ತೈತ್ತಿರೀಯ ಶ್ರುತಿ ಪ್ರಮಾಣದಂತೆ ನಾಶರಹಿತಳು, ಪರಬ್ರಹ್ಮ ಸ್ವರೂಪಿಣಿಯೂ ಆದ ಪರಾಶಕ್ತಿಯಾದ ಶ್ರೀ ಗಾಯತ್ರೀ ದೇವಿಯೆ ವೇದಕ್ಕೆ ಮಾತೆಯಾಗಿರುವಳೆಂದರೆ ಪರಮಾತ್ಮನಲ್ಲಿ ಅವ್ಯಕ್ತವಾಗಿದ್ದ ಜ್ಞಾನಭಂಡಾರವಾದ ವೇದವನ್ನು ವ್ಯಕ್ತರೂಪಕ್ಕೆ ತಂದಳು. ಹೀಗೆ ವ್ಯಕ್ತರೂಪಕ್ಕೆ ಬಂದ ವೇದಭಂಡಾರವನ್ನು 'ಸರ್ವವರ್ಣೇ ಮಹಾದೇವಿ ಸಂಧ್ಯಾವಿದ್ಯೇ ಸರಸ್ವತಿ' ಎಂಬ ಶ್ರುತಿ ವಚನಕ್ಕೆ ಅನುಸಾರವಾಗಿ ಶ್ರೀ ಗಾಯತ್ರೀ ಅವತಾರವಾದ ಶ್ರೀ ಸರಸ್ವತೀದೇವಿಯು ತನ್ನ ಹಸ್ತದಲ್ಲಿ ಪುಸ್ತಕ ರೂಪದಲ್ಲಿ ಧರಿಸಿದಳು. ಅಂದರೆ ಶ್ರೀ ಸರಸ್ವತೀ ದೇವಿಯು ಹಸ್ತದಲ್ಲಿರುವ ಪುಸ್ತಕದಲ್ಲಿ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳ ಸಕಲ ಜ್ಞಾನ ಭಂಡಾರಗಳು ಇವೆ. ಈ ಜ್ಞಾನಭಂಡಾರಕ್ಕೆ ಅನುಸಾರವಾದ ಕಾರ್ಯವೂ ನಡೆಯಬೇಕು. ಜ್ಞಾನವು ಬೋಧಿತವಾಗಬೇಕಾದರೆ ಶಬ್ದದ ಮೂಲಕವೇ ಬೋಧಿಸುತ್ತಾರಷ್ಟೆ. ಆದುದರಿಂದ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳ ಕಾರ್ಯಗಳು ನಡೆಯುವ ತತ್ವ ಸೂಚಕವಾಗಿ ಶ್ರೀ ಸರಸ್ವತೀ ದೇವಿಯ ಹಸ್ತಗಳಲ್ಲಿ ವೀಣೆಯು ಇರುವುದಾಗಿದೆ. ಆದುದರಿಂದಲೆ ಶ್ರೀ ಸರಸ್ವತೀದೇವಿಯು ಜ್ಞಾನ ಮತ್ತು ನಾದಗಳಿಗೆ ಅಧಿದೇವತೆಯಾಗಿರುತ್ತಾಳೆ.

ಶ್ರೀ ಸರಸ್ಪತೀದೇವಿಯ ಹಸ್ತಗಳಲ್ಲಿರುವ ವೀಣೆಯ ಮೇಲ್ಭಾಗದಲ್ಲಿ 4 ತಂತಿಗಳಿವೆ. ಈ 4 ತಂತಿಗಳು ಋಗ್, ಯಜು, ಸಾಮ, ಅಥರ್ವಣ ವೇದಗಳ ತತ್ವಗಳದ್ದಾಗಿ ದೇವತಾತ್ಮಕವಾದ ಶುದ್ಧ ಸತ್ವ ಗುಣದ ಜ್ಞಾನ, ಕ್ರಿಯಾ, ಇಚ್ಛಾ ಶಕ್ತಿಗಳಿಗೆ ಸೇರಿದವುಗಳಾಗಿವೆ. ವೀಣೆಯ ಪಕ್ಕದಲ್ಲಿ 3 ತಂತಿಗಳಿವೆ. ಈ 3 ತಂತಿಗಳು ಮಲಿನ ಸತ್ವರಜಸ್ತಮೋ ಗುಣಗಳಿಗೆ ಸೇರಿದವುಗಳಾಗಿವೆ. ವೀಣೆಯಲ್ಲಿ 24 ಮನೆಗಳಿವೆ. ಈ 24 ಮನೆಗಳು ಶ್ರೀ ಗಾಯತ್ರೀ 24 ಅಕ್ಷರದ ತತ್ವಗಳದ್ದಾಗಿ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳ ಕಾರ್ಯಗಳ ಮತ್ತು ಮನುಷ್ಯನು ಮೋಕ್ಷ ಪಡೆಯುವ ತತ್ವಗಳದ್ದಾಗಿವೆ. ಅಂದರೆ ಶ್ರೀ ಸರಸ್ಪತೀ ದೇವಿಯು ತನ್ನ ಹಸ್ತದಲ್ಲಿರುವ ಪುಸ್ತಕದ ಜ್ಞಾನಭಂಡಾರಕ್ಕೆ ಅನುಸಾರವಾಗಿ ಓಂಕಾರನಾದದಿಂದ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳ ಕಾರ್ಯಗಳನ್ನು ಮಾಡಿಸುತ್ತಾಳೆ. ಆದುದರಿಂದಲೇ 'ವೇದಗೀತೇನಮೋ ನಮಃ' ಎಂಬದಾಗಿ ನಾವು ನಮಸ್ಕರಿಸುತ್ತೇವೆ. ಅಂದರೆ ಶ್ರೀ ಸರಸ್ಪತೀ ದೇವಿಯು ವೇದಗಾನದಿಂದ ಜಗತ್ತಿನ

ಸೃಷ್ಟಿ ಸ್ಥಿತಿ ಲಯುಗಳನ್ನು ಮಾಡುತ್ತಾಳೆಂಬ ತಾತ್ಪರ್ಯ. ಈ ವಿಚಾರಗಳ ವಿವರ-ಗಳೆಲ್ಲಾ ನಾನು ಬರೆದಿರುವ ಶ್ರೀ ಸರಸ್ವತೀ ಮಹಿಮಾ ( ವೀ ಣಾ ರ ಹ ಸ್ಯ) ಗ್ರಂಥದಲ್ಲಿವೆ.

ಶ್ರೀ ಸರಸ್ವತೀ ಹಸ್ತಗಳಲ್ಲಿರುವ ಪುಸ್ತಕ ಮತ್ತು ವೀಣೆಯ ತತ್ವಗಳಲ್ಲಿ ಅಡಗಿರುವ ವೇದಭಂಡಾರದ ಕೆಲವು ಭಾಗಗಳನ್ನು ಜಗದೀಶ್ವರನು ಮನುಷ್ಯರ ಕಲ್ಯಾಣಕ್ಕೋಸ್ಕರ 'ಅಗ್ನಿರ್ ಋಗ್ವೇದೋ ವಾಯೋರ್ಯಜುರ್ವೇದಃ ಸೂರ್ಯಾತ್ಸಾ-ಮೇವೇದಃ ಅಥರ್ವಾಂಗಿರ ಸೋಮುಖಂ' ಎಂಬ ಶ್ರುತಿ ವಚನಾನುಸಾರ ಋಗ್ವೇದಕ್ಕೆ ಅಗ್ನಿಯನ್ನು, ಯಜುರ್ವೇದಕ್ಕೆ ವಾಯುವನ್ನೂ, ಸಾಮವೇದಕ್ಕೆ ಸೂರ್ಯನನ್ನೂ ಅಥರ್ವಣ ವೇದಕ್ಕೆ ಅಂಗೀರಸರನ್ನು ಅಧಿದೇವತೆಗಳನ್ನಾಗಿ ಮಾಡಿ ಈ ಅಗ್ನಿ, ವಾಯು, ಸೂರ್ಯ, ಅಂಗೀರಸರ ಅಂಶಗಳಿಂದ ಅವತಾರವೆತ್ತಿದ್ದ ನಿತ್ಯಮುಕ್ತರಾದ ಮಹರ್ಷಿಗಳಿಂದ ವೇದಮಂತ್ರಗಳನ್ನು ಹೊರಗೆಡವಿಸಿದನು. ಈ ಮಹರ್ಷಿಗಳು ನಿತ್ಯಮುಕ್ತರಾಗಿರುವುದರಿಂದ ದೇಹಜ್ಞಾನವಿಲ್ಲದೆ ಪ್ರಕೃಷ್ಟವಾದ ಜ್ಞಾನದ ಸ್ಥಿತಿ-ಯಲ್ಲಿ ಆನಂದಮಗ್ನರಾಗಿ ಉನ್ಮನೀ ಭಾವದಲ್ಲಿ ಪ್ರಜ್ಞಾನವೇ ನೇತ್ರವುಳ್ಳವ ರಾಗಿಯೂ. ಪ್ರಜ್ಞಾನವೇ ವಾಕ್ಕುಳ್ಳವರಾಗಿಯೂ ಉದ್ಗೀತಾ ರೂಪದಲ್ಲಿ ಗಾನ ಮಾಡಿದವುಗಳೇ ವೇದಮಂತ್ರಗಳೆನಿಸಿರುವುದರಿಂದ ವೇದಮಂತ್ರಗಳು ಅಪೌರಷೇಯ-ವೆನಿಸಿರುವುವು.

ಹೀಗೆ ಅವತಾರ ಪುರುಷರುಗಳಿಂದ ಗಾನರೂಪವಾಗಿ ಹೊರಪಡಿಸಿದ ವೇದ ಮಂತ್ರಗಳನ್ನು ಶ್ರೀ ಮಹಾವಿಷ್ಣುವಿನ ಅವತಾರವಾಗಿರುವ ಶ್ರೀ ವ್ಯಾಸಮಹರ್ಷಿ ಗಳು ಮನುಷ್ಯರ ಉದ್ಧಾರಕ್ಕೋಸ್ಕರ ಋಗ್, ಯಜಸ್ಸು, ಸಾಮ, ಅಥರ್ವಣ ಈ ನಾಲಕಕ್ಕೂ ವಿಂಗಡಿಸಿ ಆಯಾಯಾ ವೇದದ ಮುಖ್ಯ ಸಾರವನ್ನೊಳಗೊಂಡು ಮೋಕ್ಷ ಮಾರ್ಗಕ್ಕೆ ಅಮೃತರೂಪವಾದ ಮಹಾವಾಕ್ಯಗಳೆನಿಸುವ ಋಗ್ವೇದಕ್ಕೆ ಪ್ರಜ್ಞಾನಂ ಬ್ರಹ್ಮ, ಯಜುರ್ವೇದಕ್ಕೆ ಅಹಂಬ್ರಹ್ಮಾಸ್ಮಿ, ಸಾಮವೇದಕ್ಕೆ ತತ್ವಮಸಿ, ಅಥರ್ವಣ ವೇದಕ್ಕೆ ಅಯಮಾತ್ಮಾಬ್ರಹ್ಮ ಎಂಬುವುಗಳನ್ನು ಹೊರಪಡಿಸಿದರು. ಹೀಗೆ ವೇದ ಗಳನ್ನು ವಿಂಗಡಿಸಿ ರತ್ನಪ್ರಾಯವಾದ ಮಹಾವಾಕ್ಯಗಳನ್ನು ಹೊರಗೆ ತಂದುದರಿಂದ ಇವರಿಗೆ ವೇದವ್ಯಾಸರೆಂಬ ನಾಮಾಂಕಿತ ಇರುವುದು.

ವೇದ ವಾಕ್ಯಗಳು ಜ್ಞಾನ ಪ್ರಧಾನ ವಾಗಿಯೆ ಇದ್ದರೂ ಸಾಮಾನ್ಯರೆಲ್ಲರಿಗೂ ದುರವಗಾಹವಾಗಿರುವುದರಿಂದ ಜೈಮಿನಿ ಮಹರ್ಷಿಗಳು ಈ 4 ವೇದಗಳ ವಿಚಾರ,

ಗಳನ್ನು ಕರ್ಮಕಾಂಡಕ್ಕೂ ಅನ್ವಯಿಸಿರುವರು.

**ಋಗ್ವೇದೇನ ಹೋತಾಶಂಸತಿ । ಯಜುರ್ವೇದೇನ ಅಧ್ವರ್ಯುರ್ಯಜತಿ ।**
**ಸಾಮವೇದೇನೋದ್ಗಾತಾ । ಸರ್ವೈರ್ಬ್ರಹ್ಮ ॥**

ಅಂದರೆ ಒಂದು ಯಜ್ಞಕರ್ಮದಲ್ಲಿ ಋಗ್ವೇದದ ಕಾರ್ಯವಾದ ದೇವತಾವರ್ಣನೆಯ ಸ್ತೋತ್ರವನ್ನು ಹೇಳುವವನಿಗೆ ಹೋತೃವೆಂದೂ, ಯಜ್ಞೇಶ್ವರನಲ್ಲಿ ಹೋಮ ಮುಂತಾದ ಕ್ರಿಯೆಗಳನ್ನು ಮಾಡುವ ಯಜುರ್ವೇದದವನಿಗೆ ಅಧ್ವರ್ಯುವೆಂತಲೂ ಯಜ್ಞದೇವತೆಗೂ ಯಜ್ಞಕರ್ತೃವಿಗೂ ಏಕೀಕರಣ ವಾಗುವಂತಹ ಭಕ್ತಿಪೂರ್ವಕವಾದ ಸ್ತೋತ್ರಮಾಡುವ ಸಾಮವೇದದವನಿಗೆ ಉದ್ಗಾತೃವೆಂತಲೂ, ಕರ್ಮಗಳ ನ್ಯೂನಾತಿರಿಕ್ತಗಳನ್ನು ಸರಿಪಡಿಸಿ ಮಂಗಳವನ್ನುಂಟುಮಾಡುವ ಅಥರ್ವಣ ವೇದದವನಿಗೆ ಬ್ರಹ್ಮನೆಂತಲೂ ಹೆಸರುಗಳಿವೆ. ಈ ದೇವತಾ ಕರ್ಮದಂತೆ ನಾಲಕ್ಕು ವೇದಗಳ ತತ್ವಗಳು ಲೋಕ ವ್ಯವಹಾರದಲ್ಲೂ ಇರುತ್ತವೆ. ಈ ಕರ್ಮಗಳೆಲ್ಲಾ ಸ್ವರ್ಗಾದಿ ಭೋಗ ಫಲಗಳನ್ನು ಕೊಡತಕ್ಕವುಗಳೇ ವಿನಹ ಜನನಮರಣರೂಪವಾದ ಸಂಸಾರ ಬಂಧನದಿಂದ ಖಂಡಿತಾ ಬಿಡಿಸಲಾರವು.

ದೇವತಾ ಕರ್ಮವನ್ನು ಅನುಸರಿಸುವ ಜ್ಞಾನಕ್ಕಿಂತಲೂ ಆತ್ಮಜ್ಞಾನವನ್ನು ಅನುಸರಿಸಿ ಸಹಾಯ ಮಾಡುವ ಕರ್ಮವು ಶ್ರೇಷ್ಠವಾದುದು. ಇದರ ವಿಚಾರವು ಯಜುರ್ವೇದದ ಅಹಂಬ್ರಹ್ಮಾಸ್ಮಿ ತತ್ವದಲ್ಲಿ ಬರುವುದು. ಆದುದರಿಂದ ಮಹಾನುಭಾವರೂ ಪರಮ ಪೂಜ್ಯರೂ ಆದ ಶ್ರೀ ವೇದವ್ಯಾಸ ಮಹರ್ಷಿಗಳು ಅನುಗ್ರಹಿಸಿ ಕೊಟ್ಟಿರುವ ನಾಲಕ್ಕು ವೇದಗಳ ಮಹಾ ವಾಕ್ಯಗಳ ತತ್ವಗಳನ್ನು ಮನುಷ್ಯರೆಲ್ಲ ಅನುಸರಿಸಿ ಕೃತಕೃತ್ಯರಾಗಬೇಕು. ಮಹಾವಾಕ್ಯಗಳೆಂಬ ಹೆಸರು ಇರಲು ಕಾರಣ ವೇನೆಂದರೆ ಇವುಗಳಿಗೆ ಸಮನಾದ ಮಹತ್ತು ಮತ್ತೊಂದರಲ್ಲಿ ಇಲ್ಲವಾದುದರಿಂದ ಮಹಾವಾಕ್ಯಗಳೆನಿಸಿರುವವು. ಅಮೃತ ರೂಪವಾದುದೆಂದರೆ ಜನನ ಮರಣಗಳ ಬಂಧನದಿಂದ ಬಿಡಿಸಿ ಅಮೃತರೂಪನಾದ ಪರಮಾತ್ಮಸ್ಥಿತಿಯನ್ನುಂಟುಮಾಡುವುವು ಗಳಾದ್ದರಿಂದ ಅಮೃತರೂಪವಾದವುಗಳು. ವೇದಗಳೇ ಅಮೃತ ರೂಪವೆಂದು ತೈತ್ತಿರೀಯೋಪನಿಷತ್ ಶಿಕ್ಷಾವಲ್ಲಿಯಲ್ಲಿ ' ಛಂದೋಭ್ಯೋಧ್ಯಮೃತಾತ್ ಸಂಬಭೂವ ' ಅದಂರೆ ಛಂದಸ್ಸೆಂದರೆ ವೇದಗಳೆಂಬ ಅಮೃತದಿಂದ ಉಂಟಾಗಿರುವುದು ಎಂದು ಅರ್ಥ. ವೇದಗಳೇ ಅಮೃತ ರೂಪವೆಂದು ಇರುವಾಗ ವೇದಗಳ ಸಾರಭೂತ ವಾದ ಮಹಾವಾಕ್ಯಗಳು ನಿಸ್ಸಂದೇಹವಾಗಿ ಅಮೃತರೂಪಗಳಾಗಿರುತ್ತವೆ. ವೇದಗಳ





ಮಹಾವಾಕ್ಯಗಳನ್ನು ಅಸ್ತಿಭಾರವಾಗಿ ಇಟ್ಟುಕೊಂಡು ಜ್ಞಾನಿಗಳಾದ ಮಹರ್ಷಿಗಳು ಉಪನಿಷತ್ತುಗಳನ್ನು ರಚಿಸಿರುತ್ತಾರೆ.

ನಾಲಕ್ಕು ವೇದಗಳ ಮಹಾವಾಕ್ಯಗಳಾದ ಪ್ರಜ್ಞಾನಂಬ್ರಹ್ಮ, ಅಹಂ ಬ್ರಹ್ಮಾಸ್ಮಿ, ತತ್ವಮಸಿ, ಅಯಮಾತ್ಮಾಬ್ರಹ್ಮ, ಎಂಬವುಗಳ ತತ್ವವಿಚಾರಗಳನ್ನು ವಿವರವಾಗಿ ಲಂಬಿಸಿ ಬರೆದರೆ ಒಂದು ದೊಡ್ಡಗ್ರಂಥವೇ ಆಗುವುದು. ಈ ರೀತಿ ಲಂಬಿಸಿಬರೆಯಲು ನನ್ನ 90ನೇ ವಯಸ್ಸಿನಲ್ಲಿ ಶಕ್ತಿಯು ಇಲ್ಲದಿರುವುದರಿಂದ ಕ್ರೋ- ಢೀಕರಿಸಿ ತತ್ವವಿಚಾರಗಳ ಸಾರವನ್ನು ಬರೆದಿರುವೆನು. ಪಾಠಕರು ಸಾವಧಾನದಿಂದ ಪಠಿಸಿ ತತ್ವಗಳನ್ನು ಮನಸ್ಸಿಗೆ ತಂದುಕೊಳ್ಳಬೇಕಾಗಿ ಕೋರುತ್ತೇನೆ.



ಓಂ

# ಐತರೇಯೋಪನಿಷತ್

1. ಪ್ರಥಮದಲ್ಲಿ ಆತ್ಮವು ಒಂದೇ ಇತ್ತು. ಎರಡನೆಯದ್ಯಾವುದೂ ಇರಲಿಲ್ಲ. ಈ ಆತ್ಮನು ಲೋಕಗಳನ್ನು ಸೃಷ್ಟಿಸಬೇಕೆಂದು ಸಂಕಲ್ಪಿಸಿದನು. ಸಂಕಲ್ಪಿಸಿದ ಅವನು ಅಂಭೋಲೋಕ, ( ಎಲ್ಲಾದಕ್ಕೂ ಮೇಲಿರುವ ಸ್ವರ್ಗಲೋಕ ) ಮರೀಚಿ ಲೋಕ, ( ಮೃತ್ಯುಲೋಕವೆಂದರೆ ಭೂಲೋಕ) ಆಪೋಲೋಕ, ( ಕೆಳಗಿರುವ ಪಾತಾಳ ಲೋಕ ) ಈ ಮೂರನ್ನೂ ಸೃಷ್ಟಿಸಿದನು.

2. ಲೋಕಗಳಾದವು. ಲೋಕಪಾಲಕರನ್ನು ಸೃಷ್ಟಿಸಬೇಕೆಂದು ಸಂಕಲ್ಪಿ- ಸಿದನು. ಲೋಕಪಾಲಕರು ಯಾರನ್ನು ಪಾಲನೆ ಮಾಡಬೇಕು.? ಪಂಚಭೂತ ಮಾತ್ರವಿರುವ ಲೋಕವನ್ನಲ್ಲ. ಲೋಕಗಳಲ್ಲಿರುವ ಜೀವ ಕೋಟಿಗಳನ್ನು ಪಾಲನೆ ಮಾಡುವ ಕಾರ್ಯಕ್ಕೋಸ್ಕರವೇ ಲೋಕ ಪಾಲಕರನ್ನು ಸೃಷ್ಟಿಸ ಬೇಕಾಯಿತು. ಆದ್ದರಿಂದ ಲೋಕ ಪಾಲಕರ ಸೃಷ್ಟಿಯೆಂದರೆ ಬ್ರಹ್ಮಾಂಡದ ವಿರಾಟ ಪುರುಷನಿಗೆ ಬೇಕಾದ ಶಕ್ತಿಗಳ ಮತ್ತು ಲೋಕಪಾಲಕರ ಅಂಶಗಳಿಂದ ಉಂಟಾದ ವ್ಯಷ್ಟಿ ದೇಹಗಳ ಸೃಷ್ಟಿಸುವಿಕೆಯೂ ಆಗಿದೆ. ಯಾವರೀತಿ ಸೃಷ್ಟಿಸಿದನೆಂದರೆ - ಕಾವು ಕೊಟ್ಟು ನೀರಿನೊ-

ಳಗಿಂದಲೆ ಪುರುಷನನ್ನು ಬೇರೆ ತೆಗೆದು ಅವನಿಗೆ ಆಕೃತಿಯನ್ನು ಕಲ್ಪಿಸಿದನು. ಕಾಯುದ್ದ ರಿಂದ ಹೊಟ್ಟೆಯು ಒಡೆಯುವಂತೆ ಒಡೆದು ಮುಖವು ಹುಟ್ಟಿತು. ಮುಖದಿಂದ ವಾಕ್ಕು, ವಾಕ್ಕಿನಿಂದ ಅಗ್ನಿಯು, ಮೂಗಿನ ಹೊಳ್ಳೆಗಳು ಹುಟ್ಟಿದವು. ಇವುಗಳೊ ಳಗಿನಿಂದ ಪ್ರಾಣವು, ಪ್ರಾಣದಿಂದ ವಾಯುವು, ಕಣ್ಣುಗಳು ಹುಟ್ಟಿದವು. ಕಣ್ಣು ಳಿಂದ ಚಕ್ಷುರಿಂದ್ರಿಯಗಳು, ಚಕ್ಷುಗಳಿಂದ ಆದಿತ್ಯನು, ಕಿವಿಗಳು ತೋರಿದವು. ಇವು ಗಳಿಂದ ಶ್ರೋತ್ರೇಂದ್ರಿಯಗಳು, ಅವುಗಳಿಂದ ದಿಕ್ಕುಗಳು, ಚರ್ಮವು ತೋರಿವವು ಚರ್ಮದಿಂದ ಕೂದಲುಗಳು, ಇವುಗಳಿಂದ ಔಷಧಿ ವನಸ್ಪತಿಗಳು, ಹೃದಯವು ಹುಟ್ಟಿತು. ಹೃದಯದಿಂದ ಮನಸ್ಸು, ಮನದಿಂದ ಚಂದ್ರನು, ನಾಭಿಯು ಹುಟ್ಟಿತು. ನಾಭಿಯಿಂದ ಅಪಾನವು, ಅಪಾನದಿಂದ ಮರಣವು, ಶಿಶ್ನವು ತೋರಿದವು. ಶಿಶ್ನದಿಂದ ರೇತಸ್ಸು, ರೇತಸ್ಸಿನಿಂದ ನೀರು ಈ ಸೃಷ್ಟಿ ಕ್ರಮವು ವಿರಾಟಪುರುಷನ ದೇಹದ ಮತ್ತು ಪಿಂಡಾಂಡದ ದೇಹಗಳ ಸೃಷ್ಟಿಗಳೆರಡಕ್ಕೂ ಅನ್ವಯವಾಗುವುದು. ನೀರಿ ನೊಳಗಿಂದಲೆ ಪುರುಷಾಕೃತಿಯನ್ನು ಬೇರೆ ತೆಗೆದುದರ ತತ್ವದಿಂದ ಶುಕ್ಲ ಶೋಣಿತದಿಂದ ದೇಹ ಸೃಷ್ಟಿಯಾಗುವಿಕೆಯ ವಿಚಾರವೇ ಆಗಿದೆ.

3. ವಿರಾಟ ಪುರುಷನಲ್ಲಿರುವ ದೇವತೆಗಳಿಗೆ ಹಸಿವು ಬಾಯಾರಿಕೆಗಳಿಲ್ಲ ಮನುಷ್ಯಾದಿ ವ್ಯಷ್ಟಿ ಪ್ರಾಣಿಗಳಲ್ಲಿ ಹಸಿವು ಬಾಯಾರಿಕೆಗಳಿವೆ. ವ್ಯಷ್ಟಿ ಪ್ರಾಣಿಗಳಲ್ಲಿ ಪುರುಷ ಎಂದರೆ ಮನುಷ್ಯ ಜನ್ಮವೇ ಶ್ರೇಷ್ಠವೆಂಬುದನ್ನು ಇದು ದೇವತೆಗಳಿಗೂ ಇಷ್ಟವೆಂಬ ತತ್ವವನ್ನು ಸೂಚಿಸುವುದು. ಅಲ್ಲದೆ ಜ್ಞಾನೇಂದ್ರಿಯಗಳು, ಕರ್ಮೇಂದ್ರಿ ಯಗಳು, ಪಂಚಪ್ರಾಣಗಳಲ್ಲಿ ಪ್ರಾಣ, ವ್ಯಾನ, ಉದಾನ, ಸಮಾನ, ವಾಯುಗಳು ಸೃಷ್ಟಿಸಿದ ಅನ್ನವನ್ನು ಗ್ರಹಿಸಲಾರದೆ ಹೊದವು. ಅಪಾನ ವಾಯುವು ಗ್ರಹಿಸಿತು. ಅಂದರೆ ಅನ್ನವನ್ನು ನುಂಗಿ ಹೊಟ್ಟೆ ಕರುಳುಗಳ ಮೂಲಕ ಪಚನ ಮಾಡಿಸಿ ಶೇಷ ವನ್ನು ಮಲ ಮೂತ್ರವಾಗಿ ಹೊರಕ್ಕೆ ತಳ್ಳುವುದೇ ಅಪಾನ ವಾಯುವು. ಇದು ಅನ್ನವನ್ನು ಗ್ರಹಿಸುವ ತತ್ವವು.

**ಸ ಏತಮೇದ ಸೀಮಾನಂ ವಿದಾರ್ಯೈತಯಾದ್ವಾರಾ ಪ್ರಾಪದ್ಯತ।**
**ಸೈಷಾ ವಿದೃತಿರ್ನಾಮ ದ್ವಾಸ್ತದೇತನ್ನಾಂದನಮ್**
**ತಸ್ಯತ್ರಯ ಆವಸಥಾಸ್ತ್ರಯಃ ಸ್ವಪ್ನಾಃ।**
**ಅಯಮಾವ ಸಥೋಽಯಮಾವಸಥೋಽಯಮಾವಸಥ ಇತಿ॥**

ಅರ್ಥ॥ ಅವನು ಇದೇ ಬೈತಲೆಯನ್ನು ಸೀಳಿಕೊಂಡು ಈ ದ್ವಾರದಿಂದ ಸೇರಿದನು. ಆ ಇದು ವಿಧೃತಿ ಎಂಬ ಹೆಸರಿನ ದ್ವಾರವು, ಆ ಇದು ನಾನ್ದನವು. ಅವನಿಗೆ ಮೂರು ವಸತಿಗಳು ಮೂರು ಸ್ವಪ್ನಗಳು.

4. ಒಡೆಯನಾದ ನಾನಿಲ್ಲದೆ, ನನ್ನನ್ನು ಬಿಟ್ಟು ದೇಹವು ಅದರ ಕಾರ್ಯವು ಹೇಗೆ ಇರಬಲ್ಲವು? ಅಂದರೆ ಇರಲಾರವೆಂದು ಆತ್ಮನು ಯೋಚಿಸಿ ಬೈತಲೆಯ ಕೂದಲನ್ನು ಬಾಚಿ ಹಿಂದಕ್ಕೂ ಮುಂದಕ್ಕೂ ವಿಂಗಡಿಸುವ ನೆತ್ತಿಯ ಸ್ಥಳದಲ್ಲಿ ಪ್ರವೇಶಿಸಿ ಶಿರಸ್ಸಿನೊಳಗೆ ಇರುವ ಹೃದಯಾಕಾಶ ಅಥವಾ ದಹರಾಕಾಶವೆನಿಸುವ ಸ್ಥಳಕ್ಕೆ ಸೇರಿದನು. ಆತ್ಮನು ನಾನು ಎಂದು ಸಂಕಲ್ಪಿಸಿದ್ದರಿಂದ ಆತನು ನಾನು ಎಂಬ ಜ್ಞಾನರೂಪವಾಗಿಯೆ ಹೃದಯಾಕಾಶವನ್ನು ಸೇರಿದನು. ನಾನು ಎಂಬ ಜ್ಞಾನವು ಸಗುಣವೇ ಹೊರತು ನಿರ್ಗುಣವಲ್ಲ. "ಸತ್ಯಂ ಜ್ಞಾನಮನಂತಂಬ್ರಹ್ಮ," "ಸಚ್ಚಿದಾನಂದ" ಎಂಬ ಶ್ರುತಿವಾಕ್ಯಗಳಲ್ಲಿರುವ ಜ್ಞಾನವು ನಿರ್ಗುಣವೇ ಹೊರತು ಸಗುಣವಲ್ಲ. ನಾನು ಎಂಬ ಜ್ಞಾನವು ಅಲ್ಲಿರುವುದಿಲ್ಲ. ಇದಕ್ಕೆ ಆಧಾರ ಶ್ರೀ ಶಂಕರ ಭಗವತ್ಪಾದಾಚಾರ್ಯರು ಲಘುವಾಕ್ಯವೃತ್ತಿಯಲ್ಲಿ "ಸವಿಕಲ್ಪಕ ಚಿದ್ಯೋಽಹಂ ಬ್ರಹ್ಮತನ್ನಿರ್ವಿಕಲ್ಪಕಂ" ಅಂದರೆ 'ಅಹಂ' ಎನ್ನುವ ಜ್ಞಾನವು ಸಗುಣ ಬ್ರಹ್ಮವೆನಿಸುವುದು. ಪರಬ್ರಹ್ಮವೊ ನಿರ್ಗುಣ ಬ್ರಹ್ಮವೆನಿಸುವುದು ಎಂದು ಹೇಳುತ್ತಾರೆ.

ಸಗುಣವೆಂದರೆ ಸತ್ವರಜಸ್ತಮೋಗುಣಗಳಲ್ಲಿ ಒಂದಾಗಿರಬೇಕು. ಸಗುಣ ಬ್ರಹ್ಮವೆನಿಸುವ ಅಹಂ ಜ್ಞಾನವು ದೇವತಾತ್ಮಕವಾದ ಸತ್ವಗುಣದಲ್ಲೂ ಶುದ್ಧ ಸತ್ವ ಗುಣಕ್ಕೆ ಸೇರಿದುದು ಶ್ರೀ ಶಂಕರ ಭಗವತ್ಪಾದಾಚಾರ್ಯರವರ ಕೆಳಗಿನ ವಾಕ್ಯ ಇದನ್ನು ಸಮರ್ಥಿಸುವುದು.

ವಿಶುದ್ಧ ಸತ್ವಸ್ಯ ಗುಣಾಃ ಪ್ರಸಾದಃ ।
ಸ್ವಾತ್ಮಾನು ಭೂತಿಃ ಪರಮ ಪ್ರಶಾಂತಿಃ ॥
ತೃಪ್ತಿಃ ಪ್ರಹರ್ಷಃ ಪರಮಾತ್ಮ ನಿಷ್ಠಾ ।
ಯಯಾ ಸದಾನಂದರಸಂ ಸಮೃಚ್ಛತಿ ॥

ತಾತ್ಪರ್ಯ॥ ಅಂತಃಕರಣ ಪರಿಶುದ್ಧವಾಗಿರೋಣವು, ಅತ್ಯುತ್ತಮವಾದ ಶಾಂತಿಯೆಂದರೆ ಅಂತರಿಂದ್ರಿಯ ಬಹಿರಿಂದ್ರಿಯಗಳ ವಿಕಾರಗಳು ಲೇಶವೂ ಇಲ್ಲದಿರುವುದು, ಸರ್ವಸುಖವೂ ದೊರೆತಂತೆ ಇರೋಣವು, ಮನೋಲ್ಲಾಸವು, ಆತ್ಮನಿಷ್ಠೆಯಿಂದ ಆನಂದಮಯವಾಗಿರುವ ಸ್ಥಿತಿಯೆ ಶುದ್ಧ ಸತ್ವಗುಣ. ಈ ಶುದ್ಧಸತ್ವಗುಣವೇ ಶುದ್ಧ ಸತ್ವ ಪ್ರಧಾನ ಮಾಯೆಯೆನಿಸಿ ಈಶ್ವರನಿಗೆ ಪತ್ನಿಯಾಗಿರುವುದು.

ಆತ್ಮನೆಂದರೆ ಪರಬ್ರಹ್ಮವು "ನಾನು" ಎಂಬ ಶುದ್ಧಸತ್ವಗುಣ ರೂಪವಾದ

ಜ್ಞಾನಶಕ್ತಿಯಾಗಿ ಅಂದರೆ ಶುದ್ಧಸತ್ವ ಪ್ರಧಾನ ಮಾಯಾ ಶಕ್ತಿಯಾಗಿ ನಿಂತಿತು. ಶುದ್ಧ ಸತ್ವ ಪ್ರಧಾನ ಶಕ್ತಿಯು ಹೃದಯಕಾಕಾಶಕ್ಕೆ ಬಂದು ಹೃದಯಕಾಶದಲ್ಲೇ ಇರುವ ದೇಹದ ಕಾರ್ಯಗಳನ್ನು ಮಾಡಿಸುವುದಕ್ಕೆ ಮುಖ್ಯವಾದ ಅಂತಃಕರಣ(ಬುದ್ಧಿ, ಮನಸ್ಸು, ಅಹಂಕಾರ, ಚಿತ್ತ)ದ ಭಾಗವಾದ ಬುದ್ಧಿಯಲ್ಲಿರುವ ಪ್ರತಿಫಲಿತ ಚೈತನ್ಯನೊಡನೆ ಕೂಡಿಕೊಂಡಿತು. ಶ್ವಯಂ ಪ್ರಕಾಶನಾದ ಪರಬ್ರಹ್ಮನೆ(ಆತ್ಮ) ಅಂತಃಕರಣದಲ್ಲಿ ಪ್ರತಿಫಲಿಸಿ ಪ್ರತಿಫಲಿತ ಚೈತನ್ಯ ಅಥವ ಚಿದಾಭಾಸ ಚೈತನ್ಯನೆನಿಸಿಕೊಂಡು ಇರುತ್ತಾನೆ. ಈ ಪ್ರತಿಫಲಿತ ಚೈತನ್ಯನು ಸತ್ವರಜಸ್ತಮೋಗುಣಗಳಿಗೆ ಸೇರದೆ ಶುದ್ಧ ಪ್ರತಿಫಲಿತ ಚೈತನ್ಯ ಸ್ವರೂಪನಾಗಿಯೆ ಇರುತ್ತಾನೆ. ಈ ಪ್ರತಿಫಲಿತ ಚೈತನ್ಯನೆ ಪ್ರತಿಯಾಗಿಯೂ ಇದರೊಡನೆ ಸೇರಿರುವ ಅಹಂ ಜ್ಞಾರೂಪವಾದ ಶುದ್ಧಸತ್ವಪ್ರಧಾನ ಮಾಯಾ-ಶಕ್ತಿಯು ಪತ್ನಿಯಾಗಿಯೂ ಇರುತ್ತಾರೆ. ಅಹಂ ಜ್ಞಾನವ ಜೀವ, ಪ್ರತಿಫಲಿತ ಚೈತನ್ಯನೆ ಜೀವಾತ್ಮನಾಗಿರುತ್ತಾರೆ. ಇವರಿಬ್ಬರೂ ದೇಹದ ಕಾರ್ಯಗಳಿಗೆ ಪ್ರಕಾಶ ಕರಾಗಿರುತ್ತಾರೆ.

ಆತ್ಮನು ಶಿರಸ್ಸಿನ ನೆತ್ತಿಯ ಸ್ಥಳದಿಂದ ಹೃದಯಾಕಾಶಕ್ಕೆ ಪ್ರವೇಶಿಸಿದನೆಂದು ಮೇಲೆ ತಿಳಿಸಿರುತ್ತಷ್ಟೆ. ಈ ಸ್ಥಳಗಳ ತತ್ವ ವಿಚಾರಕ್ಕೆ ಕೆಳಗಿನ ತೈತ್ತಿರೀಯೋಪನಿ-ಷತ್ತಿನ ವಾಕ್ಯಗಳು ಸಮರ್ಥಿಸುವುವು. "ವ್ಯಪೋಹ್ಯಶೀರ್ಷ ಕಪಾಲೇ" ಕಪಾಲ ವೆಂದರೆ ನೆತ್ತಿಯ ಚಿಪ್ಪು ನೆತ್ತಿಯಿಂದ ಮುಂದುಗಡೆ ಹಣೆಯವರೆಗೂ ಹಿಂದುಗಡೆ ಶಿರಸ್ಸಿನ ಹಿಂಬಾಗದವರೆಗೂ ಗರ್ಭದಲ್ಲಿರುವ ಶಿಶುವಿನಲ್ಲಿ ಸೀಳಿದಂತೆ ಎರಡು ಭಾಗ ಗಳಾಗಿದ್ದು ಅನಂತರ ಒಂದಾಗಿ ಕೂಡಿಕೊಳ್ಳುವುದು. ಆಧುನಿಕ ವೈದ್ಯಶಾಸ್ತ್ರವೂ ಇದನ್ನು ತಿಳಿಸುವುದು. "ಯತ್ರಾ ಸೌಕೇಶಾನ್ತೋ ವಿವರ್ತತೇ" ಭ್ರೂ ಮಧ್ಯಕ್ಕೆ ಸರಿಯಾಗಿ ಹಣೆಯ ಮೇಲುಗಡೆಯಿಂದ ನೆತ್ತಿಯವರೆಗೆ ಕೂದಲುಗಳನ್ನು ಎರಡು ಕಡೆಗೂ ಬಾಚಿ ವಿಂಗಡಿಸುವ ಸ್ಥಳವು ಬೈತಲೆ. ಬೈತಲೆಯ ತುದಿಯು ಇರುವ ಸ್ಥಳವೆಂದರೆ ಮೂರ್ಧ ಪ್ರದೇಶ ಅಥವಾ ನೆತ್ತಿ. ತಲೆಯಲ್ಲಿ ಬೆಳೆಯುವ ಕೂದಲು ಈ ನೆತ್ತಿಯ ಸ್ಥಳದಿಂದಲೇ ಹಿಂಭಾಗಕ್ಕೂ ಮುಂಭಾಗಕ್ಕೂ ಸ್ವಾಭಾವಿಕವಾಗಿ ಬೆಳೆದು ಭಾಗಗಳಾಗಿರುತ್ತದೆ. ಈ ನೆತ್ತಿಯಲ್ಲಿ ರಂಧ್ರವನ್ನು ಮಾಡಿಕೊಂಡು ಆತ್ಮನು ದೇಹಕ್ಕೆ ಪ್ರವೇಶ ಮಾಡಿದನು. ಅಲ್ಲದೆ ಆತ್ಮನು ನೆತ್ತಿಯ ಸ್ಥಾನದಿಂದ ಪ್ರವೇಶಿಸಿ ಶಿರಸ್ಸಿನಲ್ಲಿರುವ ಹೃದಯಾಕಾಶದಲ್ಲಿ ನಿಂತನು ಎಂದು ಬರೆದಿರುವುದಷ್ಟೆ. ಈ ತತ್ವ ಸಮರ್ಥನೆಗೆ ತೈತ್ತಿರೀಯೋಪನಿಷತ್ತಿನಲ್ಲಿ "ಸಯಏಷೋನ್ತರ್ ಹೃದಯ ಆಕಾಶಃ" ಎಂಬ ಆಧಾರವಾಕ್ಯವಿರುವುದು. ಮೇಲಿನ ಐತರೇಯೋಪನಿಷತ್ತಿನ ಮಂತ್ರದಲ್ಲಿ ಆತ್ಮನು ಪ್ರವೇಶಿಸಿದ ದ್ವಾರಕ್ಕೆ 'ನಾನ್ದನಮ್' ಎಂಬ ಹೆಸರಿರುವುದು. ಈ ದ್ವಾರ

ದಲ್ಲಿ ಬರಲು ಪರಮೇಶ್ವರ ನೊಬ್ಬನಿಗೆದಾರಿಯಾಗಿರುವುದರಿಂದ ಆನಂದ ರೂಪವಾದ ಸ್ಥಳ ವಾದ್ದರಿಂದ ಇದಕ್ಕೆ 'ನಾನ್ದನಮ್' ಎಂಬ ಹೆಸರಿದೆ.

ಆತ್ಮನು ಯಾವ ಕಾಲದಲ್ಲಿ ನೆತ್ತಿಯ ಮಾರ್ಗವಾಗಿ ದೇಹಕ್ಕೆ ಪ್ರವೇಶಿಸುತ್ತಾ-ನೆಂಬುದನ್ನು ಅರಿಯೋಣ. ಐತರೇಯೋಪನಿಷತ್ತಿನಲ್ಲಿ ದೇಹ ಸೃಷ್ಟಿಯಾದ ಮೇಲೆ ಆತ್ಮನು ದೇಹಕ್ಕೆ ಪ್ರವೇಶಿಸಿದನೆಂದು ಹೇಳಿದೆ. ಮಾತೃವಿನ ಗರ್ಭದಿಂದ ಜನನ ವಾದಾಗ ಸೃಷ್ಟಿಯು ಪೂರ್ಣವಾಗುವುದೆಂದು ಸಾಮಾನ್ಯವಾಗಿ ಭಾವಿಸುತ್ತಾರೆ. ಇದು ಸರಿಯಲ್ಲ. 7ನೇ ತಿಂಗಳಲ್ಲಿ ಸೃಷ್ಟಿ ಪೂರ್ಣವಾಗುತ್ತೆ, 8-9ನೇ ತಿಂಗಳಲ್ಲಿ ದೇಹ ವ್ಯಾಪಾರಕ್ಕೆ ಬೇಕಾದ ಸಲಕರಣೆಗಳು ದೇಹದೊಳಗೆ ಉಂಟಾಗುವುವು. ಆದ್ದರಿಂದ ಜನನವಾದ ನಂತರ ಪರಮಾತ್ಮನು ನೆತ್ತಿಯ ದ್ವಾರದಿಂದ ಪ್ರವೇಶಿಸು ತ್ತಾನೆಂದು ಭಾವಿಸಬಾರದು. ಗರ್ಭದ ಬೆಳವಣಿಗೆಯಲ್ಲಿ ಏಳನೇ ತಿಂಗಳಿಗೆ ದೇಹದ ಸೃಷ್ಟಿಯು ಪೂರ್ಣವಾಗುವುದರಿಂದ ಆತ್ಮನು ಏಳನೇ ತಿಂಗಳಲ್ಲಿ ದೇಹಕ್ಕೆ ಪ್ರವೇಶಿಸು ತ್ತಾನೆ. ಇದನ್ನು ಗರ್ಭೋಪನಿಷತ್ತಿನ 'ಸಪ್ತಮೆಮಾಸೆ ಜೀವ ಸಂಯುಕ್ತೋ ಭವತಿ' ಎಂಬ ವಾಕ್ಯವು ಸಮರ್ಥಿಸುವುದು.

**ಕೋಽಯಮಾತ್ಮೇತಿ ವಯಮು ಪಾಸ್ಮಹೇ ಕತರಃ ಸ ಆತ್ಮಾ।**
**ಯೇನ ವಾಪಶ್ಯತಿ ಯೇನವಾ ಶೃಣೋತಿ ಯೇನ ವಾ॥**
**ಗನ್ಧಾ ನಾಜಿಘ್ರತಿ ಯೇನ ವಾ ವಾಚಂ ವ್ಯಾಕರೋತಿ।**
**ಯೇನ ವಾ ಸ್ವಾದು ಚ ಸ್ವಾದು ಚ ವಿಜಾನಾತಿ॥**

ಅರ್ಥ॥ ಈ ಆತ್ಮನು ಯಾರೆಂದು ನಾವು ಉಪಾಸನೆ ಮಾಡೋಣ, ಆ ಆತ್ಮನು ಇಬ್ಬರಲ್ಲಿ ಯಾವನು ? ಏತರಿಂದ ನೋಡುತ್ತಾನೋ, ಏತರಿಂದ ಕೇಳುತ್ತಾನೊ, ಏತರಿಂದ ವಾಸನೆಯನ್ನು ಮೂಸುತ್ತಾನೋ, ಏತರಿಂದ ಮಾತುಗಳನ್ನು ಬಿಡಿಸಿ ಆಡುತ್ತಾನೋ, ಏತರಿಂದ ರುಚಿಯಾದದ್ದು, ರುಚಿಯಲ್ಲದ್ದು ಎಂಬುದನ್ನು ಅರಿಯುತ್ತಾನೋ.

ಭಾಷ್ಯದಲ್ಲಿರುವುದು:- ಆತ್ಮನು ಬೈತಲೆಯನ್ನು ಶೀಳಿಕೊಂಡು ಆ ದ್ವಾರದಿಂದ ದೇಹವನ್ನು ಪ್ರವೇಶಿಸಿದನೆಂದು ಹಿಂದಿನ ಮಂತ್ರದಲ್ಲಿ ತಿಳಿಸಿದೆ. ಐತರೇಯ ಅರಣ್ಯಕದ 2-1-4ರಲ್ಲಿ ಮುಂಗಾಲುಗಳ ಮೂಲಕವಾಗಿ ಆತ್ಮನು ದೇಹವನ್ನು ಪ್ರವೇಶಿಸಿ ಪ್ರಾಣ ರೂಪನಾಗಿರುತ್ತಾನ್ನೆಂತ ಇದೆ. ನೆತ್ತಿಯ ಮೂಲಕ ಪ್ರವೇಶಿಸಿದ ಆತ್ಮನು ಮುಂಗಾಲು

ಮೂಲಕ ಪ್ರವೇಶಿಸಿದ ಆತ್ಮನು ಎಂಬ ಎರಡು ಆತ್ಮರು ( ಬ್ರಹ್ಮಗಳು ) ಇರುತ್ತಾರೆಂತಾಯಿತು. ಈ ಎರಡರಲ್ಲಿ ಯಾರನ್ನು ನಾವು ಉಪಾಸನೆ ಮಾಡಬೇಕು ? ಎಂಬುದಾಗಿ ವಿಮರ್ಶೆಮಾಡಿ ಪ್ರಾಣನುಕರ್ಷಣವೆಂದರೆ ಕ್ರಿಯಾರೂಪದವನು ನೆತ್ತಿಯ ದ್ವಾರಾ ಪ್ರವೇಶಿಸಿ ಅಂತಃಕರಣದಲ್ಲಿ ನೆಲೆಸಿರುವವನು ಪ್ರಜ್ಞಾನರೂಪನಾಗಿರುವುದರಿಂದ ನೋಡುವಿಕೆ ಕೇಳುವಿಕೆ ಮುಂತಾದ ಜ್ಞಾನೇಂದ್ರಿಯಗಳ ಕಾರ್ಯಕ್ಕೆ ಪ್ರಕಾಶನಾಗಿ ಆ ಜ್ಞಾನೇಂದ್ರಿಯಗಳ ಕಾರ್ಯವಾದ ಕೇಳುವಿಕೆ, ನೋಡುವಿಕೆ ಮುಂತಾದ್ದನ್ನು ತಿಳಿದುಕೊಳ್ಳುತ್ತಾನಾದ್ದರಿಂದ ಶ್ರೇಷ್ಠವಾದ ಆವನನ್ನೇ ಉಪಾಸನೆ ಮಾಡುವುದೆಂದು ಇತ್ಯರ್ಥ ಮಾಡಿದರು. ವಾಮದೇವನು ನೆತ್ತಿಯ ದ್ವಾರಾ ಬಂದ ಆತ್ಮನನ್ನೇ ಅರಿತು ಅಮೃತ ರೂಪನಾದನೆಂದು ಭಾಷ್ಯದಲ್ಲಿ ಹೇಳಿದೆ.

ಈ ಮೇಲಿನ ವಿಚಾರದ ತತ್ವವನ್ನು ಸುಲಭವಾಗಿ ಅರಿಯಲು ಸೃಷ್ಟಿಯ ಆದಿಯಲ್ಲಿ ಪರಾಶಕ್ತಿಯು ಪರಬ್ರಹ್ಮತ್ವದಿಂದ ಹೊರ ಉದಯಿಸಿದ ಕೂಡಲೆ ಅಕ್ಷರಕ್ಕೆಲ್ಲಾ ಪ್ರಥಮಾಕ್ಷರವಾಗಿಯೂ ಇನ್ನೊಂದರಿಂದ ಪ್ರಕಾಶವಾಗಿದೆ 'ಸ್ವತೋರಂಜಯತೇತಿ ಸ್ವರಃ' ಎಂಬ ವ್ಯುತ್ಪತ್ತಿ ಯಂತೆ ಸ್ವತಃ ಪ್ರಕಾಶಕಗಳಾದ ಅಂ ಮತ್ತು ಅಃ ಎಂಬ ಎರಡು ಸ್ವರಾಕ್ಷರಗಳಲ್ಲಿ ನೆಲೆಸಿತು. ವಿಸರ್ಗಾಕ್ಷರವಾದ 'ಅಃ' ಎಂಬ ಅಕ್ಷರವು ಪರಾಶಕ್ತಿಯ ಕ್ರಿಯಾಶಕ್ತಿ 'ಅಃ' ಎಂಬ ಅಕ್ಷರವು ಪರಾಶಕ್ತಿಯ ಜ್ಞಾನಶಕ್ತಿ. ಪ್ರಥಮದಲ್ಲಿ ಕ್ರಿಯಾಶಕ್ತಿಯಾದ 'ಅಃ' ಎಂಬ ಅಕ್ಷರವು ಸ್ಪಂದನ ರೂಪದಲ್ಲಿ ಪ್ರಸರಿಸಿತು. ಇದು ಪ್ರಸರಿಸಿದಷ್ಟು ಜಾಗವೆ ವಿಶ್ವಸ್ವರೂಪವೆನಿಸಿ ಕಳಾಸ್ಥಿತಿಯಾಗಿರುವುದು. ಕಳಾದಿಂದ ನಾದ ಮತ್ತು ಬಿಂದು ರೂಪವಾದ ಜಗತ್ತು ಸೃಷ್ಟಿಸಲ್ಪಡುವುದು. ಹೀಗೆ ಸೃಷ್ಟಿಸಿದ ಜಗತ್ತನ್ನು ಅಃ ಅಕ್ಷರದ ಪರಾಶಕ್ತಿಯು ಆದಿಶೇಷ ಶಕ್ತಿರೂಪದಲ್ಲಿ ಧರಿಸುವುದು. ಜ್ಞಾನಶಕ್ತಿಯಾದ 'ಅಂ' ಎಂಬ ಅಕ್ಷರವೂ ಕೂಡ 'ಅಃ' ಎಂಬ ಅಕ್ಷರದ ಜೊತೆಯಲ್ಲೇ ಪ್ರಸರಿಸಿ ಕೊನೆಯಲ್ಲಿ 'ಅಃ' ಅಕ್ಷರನನ್ನು ತನ್ನ ಜೊತೆಯಲ್ಲಿ ಸೇರಿಸಿಕೊಂಡು 'ಅಹಂ' ಎಂಬ ಜ್ಞಾನವಾಗಿ ಜಗತ್ತನ್ನೆಲ್ಲಾ ವ್ಯಾಪಿಸಿ ಈಶ್ವರಿ ಎನಿಸಿಕೊಂಡಿರುವಳು. ಮನುಷ್ಯರಲ್ಲೂ ಈ 'ಅಹಂ' ಎಂಬಪರಾಶಕ್ತಿಯೆ ನೆತ್ತಿಯ ದ್ವಾರಾ ಅಂತಃಕರಣಕ್ಕೆ ಬಂದು ನೆಲೆಸುವುದು.

'ಅಃ' ಅಕ್ಷರವು 'ಅಂ' ಅಕ್ಷರಕ್ಕೆ ಸೇರಿಯೂ ಇರುವುದು ಮತ್ತು ಪ್ರತ್ಯೇಕವಾಗಿಯೂ ಇರುವುದು. ಕ್ರಿಯಾಶಕ್ತಿಯಾದ 'ಅಃ' ಅಕ್ಷರವೂ, ಜ್ಞಾನ ಶಕ್ತಿಯಾದ 'ಅಂ'ಅಕ್ಷರವೂ ಸರ್ವವ್ಯಂಜನಾಕ್ಷರಗಳಲ್ಲಿಯೂ ವ್ಯಾಪಿಸಿರುವುವು. ಇವುಗಳಲ್ಲಿ 'ಹ' ಅಕ್ಷರವು ಸೂರ್ಯಶಕ್ತಿಯಾಗಿಯೂ 'ಸ' ಅಕ್ಷರವು ಚಂದ್ರಶಕ್ತಿಯಾಗಿಯೂ ನಮ್ಮಲ್ಲಿ ಭ್ರೂಮಧ್ಯ ಮತ್ತು ಮೂಲಾಧಾರದಲ್ಲಿರುವುವು. ಪ್ರಧಾನವಾದ 'ಅಃ' ಅಕ್ಷರವು

ಸರ್ಪರೂಪವನ್ನು ತಾಳಿದ ಶ್ರೀ ಕುಂಡಲಿನೀ ಶಕ್ತಿಯೆನಿಸಿ ಮೂಲಾಧಾರದ ಮೇಲ್ಭಾಗ ದಲ್ಲಿದ್ದು ಸೂರ್ಯ ಚಂದ್ರರುಗಳಿಂದ ಯಾತಾಯಾತ ರೂಪವಾದ ಸ್ಪಂದನವನ್ನುಂಟು-ಮಾಡಿಸಿ ಪಂಚಪ್ರಾಣಗಳ ಕಾರ್ಯಗಳನು ಮಾಡಿಸುತ್ತಾ ಮುಖ್ಯ ಪ್ರಾಣಶಕ್ತಿಯೆನಿಸಿ ಕೊಂಡು ಇರುವುದು. ಪರಾಶಕ್ತಿಯಾದ 'ಅ೩' ಶಕ್ತಿಯೆ ಪ್ರಾಣಶಕ್ತಿಯಾಗಿ ಸ್ವತಂತ್ರ ವಾಗಿರುವುದರಿಂದಲೆ, ಮಹರ್ಷಿಗಳು ಆತ್ಮನೆ (ಪರಬ್ರಹ್ಮನೆ), ಪ್ರಾಣರೂಪವಾಗಿರು ತ್ತಾನೆಂತ ಹೇಳಿ ಮಹತ್ವವನ್ನು ಆತ್ಮನಿಗೇ ಕೊಟ್ಟಿರುತ್ತಾರೆ. ಪರಮಾತ್ಮನೇ ನೇರವಾಗಿ ಕಾರ್ಯ ಮಾಡುತ್ತಾನೆನ್ನುವುದು ಅಷ್ಟು ಸೂಕ್ಷ್ಮವಾಗಿ ಕಾಣುಬರುವುದಿಲ್ಲವಾದ್ದರಿಂದ ತತ್ವ ವಿಂಗಡನೆಗೋಸ್ಕರ ಪರಾಶಕ್ತಿಯು ಕಾರ್ಯವೆಂದು ಇಲ್ಲಿ ತಿಳಿಸಿದೆ. ಪರಾಶಕ್ತಿಯು ಪರಬ್ರಹ್ಮನಿಗಿಂತ ಭಿನ್ನವಾದುದಲ್ಲ. ಆದುದರಿಂದ (ತತ್ವತಃ) ಏನೂ ಭೇದವಾಗುವುದಿಲ್ಲ.

ಅಂತಃಕರಣದಲ್ಲಿರುವ ಜ್ಞಾತೃವಿನ ಪ್ರಜ್ಞಾನರೂಪವೆ ಪರಬ್ರಹ್ಮವೆಂದು ತಿಳಿಯಬೇಕೆಂದು ಉಪನಿಷತ್ತಿನಲ್ಲಿ ಹೇಳಿದೆ. ಬುದ್ಧಿ, ಮನಸ್ಸು, ಅಹಂಕಾರ, ಚಿತ್ತ ಗಳು ಸೇರಿದ್ದು ಅಂತಃಕರಣವೆನಿಸುವುದು. ಇದರಲ್ಲಿ ಬುದ್ಧಿಯ ಕಾರ್ಯವು ಜ್ಞಾನ-ರೂಪವಾದುದು. ಅಂತಃಕರಣವು ಮಲಿನ ಸತ್ವಗುಣದಿಂದ ನಿರ್ಮಿತವಾಗಿರುವುದರಿಂದ ಬುದ್ಧಿಯ ಜ್ಞಾನವು ಮಲಿನ ಜ್ಞಾನವೇ ಹೊರತು ಪ್ರಜ್ಞಾನವೆನಿಸಿಕೊಳ್ಳುವುದಿಲ್ಲ. ಪ್ರಜ್ಞಾನವೆಂದರೆ ಪ್ರಕೃಷ್ಟವಾದ ಅಥವಾ ಅತ್ಯುತ್ತಮವಾದ ಜ್ಞಾನವೆಂದು ಅರ್ಥ. ಆದುದರಿಂದ ಬುದ್ಧಿಯಲ್ಲಿರುವ ಶುದ್ಧ ಸತ್ವ ಪ್ರಧಾನ ಪ್ರಕೃತಿಯಾದ ಅಹಂ ಜ್ಞಾನ ವೇ ಪ್ರಜ್ಞಾನವೆನಿಸುವುದು. "ಪರಬ್ರಹ್ಮವೊ ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂಬ ಆಧಾರದಂತೆ ಜ್ಞಾನಸ್ವರೂಪವೆಂದು ಹೇಳಬೇಕಲ್ಲದೆ ಪರಬ್ರಹ್ಮವನ್ನು ಪ್ರಜ್ಞಾನವೆಂದು ಕರೆಯಲು ಆಗುವುದಿಲ್ಲ. ಪ್ರಜ್ಞಾನವೆಂಬ ಪದದಲ್ಲಿ ಪ್ರಕೃಷ್ಟವಾದ ಎಂಬ ವಿಶೇಷಣ (ಗುಣವಾಚಕ) ಇದೆ. ಪರಬ್ರಹ್ಮನಲ್ಲಿ ವಿಶೇಷಣ ಇಲ್ಲವೇ ಇಲ್ಲ. ಅಲ್ಲದೆ ಶುದ್ಧಸತ್ವ ಮಾಯರೂಪವಾದ ಅಹಂ ಜ್ಞಾನವು ಪರಬ್ರಹ್ಮವಾದಾಗ ಪ್ರತ್ಯೇಕವಾದ ಅಹಂ ಜ್ಞಾನವೆಂಬುದು ಪರಬ್ರಹ್ಮನಲ್ಲಿ ಇರುವುದಿಲ್ಲ. ಆದುದರಿಂದ ಶುದ್ಧ ಸತ್ವಮಾಯಾ ರೂಪವಾದ ಅಹಂ ಜ್ಞಾನವೇ ಪ್ರಜ್ಞಾನವಾಗಿರುವುದು.

ಪ್ರಜ್ಞಾನವೆನಿಸುವ ಶುದ್ಧವಾದ ಅಹಂ ಜ್ಞಾನವೇ ಮನುಷ್ಯರ ಶರೀರದಲ್ಲಿ ಕ್ಷೇತ್ರಜ್ಞರೂಪದಲ್ಲಿ ಇರುವುದು. ಅಲ್ಲದೆ ಕ್ಷರ, ಅಕ್ಷರಗಳಲ್ಲಿ ಅಕ್ಷರರೂಪವಾಗಿಯೂ ಇರುವುದು. ಅಂದರೆ ಪ್ರಜ್ಞಾನವೆ ಕ್ಷೇತ್ರಜ್ಞ ಮತ್ತು ಅಕ್ಷರರೂಪಗಳಾಗಿರುವುದು. ಈ ವಿಚಾರಕ್ಕೆ ನನ್ನಿಂದ ಬರೆಯಲ್ಪಟ್ಟ ಭಗವದ್ಗೀತಾ ಮುಖ್ಯ ತತ್ವಗಳ ಗ್ರಂಥವನ್ನು ಪಠಿಸಿದರೆ ವಿಚಾರಗಳನ್ನು ಚೆನ್ನಾಗಿ ಅರಿಯಬಹುದು. ಪರಾಶಕ್ತಿಯ

ಜ್ಞಾನ ಶಕ್ತಿಯಾದ ಪ್ರಜ್ಞಾನವೆನಿಸುವ ಶುದ್ಧ ಅಹಂ ಜ್ಞಾನದ ಮತ್ತು ಪರಾಶಕ್ತಿಯ ಕ್ರಿಯಾಶಕ್ತಿಯಾದ ಅಃ ಅಕ್ಷರದ ತತ್ವವಾದ ಪ್ರಾಣರೂಪದಲ್ಲಿರುವ ಶ್ರೀ ಕುಂಡಲಿನೀ ಶಕ್ತಿಯ ವಿಚಾರಗಳು ಮುಂದೆ ಬರೆದಿರುವ ನಾಲಕ್ಕು ವೇದಗಳ ಮಹಾವಾಕ್ಯಗಳ ತತ್ವಗಳ ವಿಚಾರದಲ್ಲೂ ವಿವರವಾಗಿ ಬಂದಿರುವುದರಿಂದ ಇಲ್ಲಿ ಬರೆದಿರುವುವುಗಳನ್ನು ಜ್ಞಾಪಕದಲ್ಲಿಟ್ಟುಕೊಂಡರೆ ವಿಚಾರಗಳು ಚೆನ್ನಾಗಿ ಮನದಟ್ಟಾಗುವುವು.

## ನಾಲಕ್ಕು ವೇದಗಳ ಮಹಾವಾಕ್ಯಗಳಾದ ಪ್ರಜ್ಞಾನಂ ಬ್ರಹ್ಮ, ಅಹಂ ಬ್ರಹ್ಮಾಸ್ಮಿ, ತತ್ವಮಸಿ, ಅಯಮಾತ್ಮಾ ಬ್ರಹ್ಮ ಎಂಬವುಗಳ ತತ್ವ ವಿಚಾರ.

ವೇದವೆಂದರೆ ಜ್ಞಾನ. ವೇದವೆಂಬುವುದು ಜ್ಞಾನ ಮತ್ತು ಶಬ್ದಮಯ ಭಂಡಾರವಾಗಿರುವುದು. ಇದನ್ನು ಋಗ್, ಯಜು, ಸಾಮ, ಅಥರ್ವಣವೆಂದು ನಾಲಕ್ಕು ಭಾಗಗಳಾಗಿ ಶ್ರೀ ವೇದವ್ಯಾಸ ಮಹರ್ಷಿಗಳು ವಿಂಗಡಿಸಿರುವರು. ಈ ವಿಂಗಡಣೆಯು ಶಬ್ದ ಶಕ್ತಿ ಮತ್ತು ಜ್ಞಾನಗಳ ಆಧಾರದ ಮೇಲೆ ನಿಂತಿರುವುದು. ಇವುಗಳ ಭೇದವು ವೇದಾಧ್ಯಯನ ಕಾಲದಲ್ಲಿರುವ ಸ್ವರಶಕ್ತಿಗಳಿಂದ ಗೋಚರವಾಗುವುವು ಸೃಷ್ಟಿ, ಸ್ಥಿತಿ, ಲಯಗಳ ಜ್ಞಾನ ಮತ್ತು ಕಾರ್ಯಗಳ ವಿಚಾರಗಳನ್ನೆಲ್ಲಾ ಈ ವೇದ ಭಂಡಾರವು ಒಳಗೊಂಡಿರುವುದು. ಮನುಷ್ಯನು ತಿಳಿದು ಉದ್ಧಾರವಾಗಲು, ಅಂದರೆ ಮೋಕ್ಷವನ್ನು ಪಡೆಯುವ ಸೌಕರ್ಯಕ್ಕೋಸ್ಕರವೆ ನಾಲಕ್ಕು ವೇದಗಳ ಸಾರಭೂತವಾಗಿರುವ ಮಹಾವಾಕ್ಯಗಳನ್ನು ವೇದವ್ಯಾಸ ಮಹರ್ಷಿಗಳು ಹೊರಪಡಿಸಿರುವರು. ಅವುಗಳು ಯಾವುವೆಂದರೆ – ಋಗ್ವೇದದ್ದು ಪ್ರಜ್ಞಾನಂ ಬ್ರಹ್ಮ, ಯಜುರ್ವೇದದ್ದು ಅಹಂ ಬ್ರಹ್ಮಾಸ್ಮಿ, ಸಾಮವೇದದ್ದು ತತ್ವಮಸಿ, ಅಥರ್ವಣ ವೇದದ್ದು ಅಯಮಾತ್ಮಾ ಬ್ರಹ್ಮ.

ಋಗ್ವೇದವು ಜ್ಞಾನಶಕ್ತಿ, ಯಜುರ್ವೇದವು ಕ್ರಿಯಾಶಕ್ತಿ, ಸಾಮವೇದವು ಇಚ್ಛಾಶಕ್ತಿ, ಅಥರ್ವಣ ವೇದವು ಇಚ್ಛಾಶಕ್ತಿಯ ಅನುವರ್ತಿಯಾಗಿ ಮೂರು ವೇದಗಳ ಫಲರೂಪವಾದ ಮಂಗಳ ಸ್ವರೂಪವಾದುದು. ಈ ಜ್ಞಾನ ಕ್ರಿಯಾ ಇಚ್ಛಾಶಕ್ತಿಗಳು ಶುದ್ಧಸತ್ವ ಗುಣಕ್ಕೆ ಸೇರಿ ದೇವತಾತ್ಮಕಗಳಾಗಿವೆ. ಋಗ್ವೇದಕ್ಕೆ ಅಗ್ನಿ, ಯಜುರ್ವೇದಕ್ಕೆ ವಾಯು, ಸಾಮವೇದಕ್ಕೆ ಸೂರ್ಯ, ಅಥರ್ವಣ ವೇದಕ್ಕೆ ಆಂಗೀರಸ, ಇವರು ವೇದಗಳನ್ನು ಪ್ರಚಾರಮಾಡಿದ ದೇವತೆಗಳು. ಋಗ್ವೇದವು ಜ್ಞಾನಶಕ್ತಿ ಸೇರಿದುದರಿಂದ

ದೇವತಾಗುಣ ವರ್ಣನೆಯನ್ನು ನಿರೂಪಿಸಿರುವುದು. ಯಜುರ್ವೇದವು ಕ್ರಿಯಾಶಕ್ತಿಗೆ ಸೇರಿದುದರಿಂದ ದೇವತಾಆರಾಧನಾ ರೂಪವಾದ ಕರ್ಮಮಾಡುವಿಕೆಯನ್ನು ನಿರೂಪಿಸುವುದು. ಸಾಮವೇದವು ಇಚ್ಛಾಶಕ್ತಿಗೆ ಸೇರಿದುದರಿಂದ ಆರಾಧಿಸಿದ ದೇವತಾಶಕ್ತಿಗೂ ತನಗೂ ನಿಕಟ ಸಂಬಂಧವನ್ನು ಉಂಟುಮಾಡಿಕೊಳ್ಳುವ ಭಕ್ತಿ ಅಥವಾ ಪ್ರೀತಿಯನ್ನು ನಿರೂಪಿಸುವುದು. ಅಥರ್ವಣವೇದವು ಇಚ್ಛಾಶಕ್ತಿಯ ಅನುವರ್ತಿಯಾಗಿ ಅಂದರೆ ಸಂಕಲ್ಪಕ್ಕೆ ಅನುಸಾರವಾಗಿ ದೇವತಾಜ್ಞಾನ, ದೇವತಾ ಆರಾಧನ, ದೇವತಾ ಶಕ್ತಿಗೂ ತನಗೂ ಉಂಟಾದ ಏಕೀಕರಣ ಇವುಗಳನ್ನೆಲ್ಲಾ ಅನುಸರಿಸಿದ ಫಲವನ್ನುಂಟುಮಾಡಿ ಮಂಗಳ ಪ್ರದನಾದುದು. ಅಥ ಎಂದರೆ ಮಂಗಳವೆಂದು ಅರ್ಥ. ಆದುದರಿಂದ ಕಾರ್ಯಕ್ಕೆ ಅನುಸಾರವಾದ ಮಂಗಳವನ್ನುಂಟು ಮಾಡುವುದು ಅಥರ್ವಣ ವೇದ. ಈ ನಾಲಕ್ಕು ವೇದಗಳ ಶಬ್ದಗಳ ವ್ಯುತ್ಪತ್ತಿಯನ್ನು ವಿವರವಾಗಿ ನನ್ನಿಂದ ರಚಿತವಾದ ಶ್ರೀ ಸರಸ್ವತೀ ಮಹಿಮಾ(ವೀಣಾರಹಸ್ಯ) ಗ್ರಂಥದಲ್ಲಿ ಬರೆದಿರುವುದು.

ನಮ್ಮ ಇಷ್ಟಾರ್ಥ ಸಿದ್ಧಿಗೋಸ್ಕರ ನಮಗೆ ಕೇವಲ ಪ್ರೀತಿಯಾದ ದೇವರನ್ನು ಆರಾಧಿಸಿ ಭಕ್ತಿಪೂರ್ವಕವಾಗಿ ಸ್ತೋತ್ರಮಾಡಿ ನಮ್ಮ ಇಷ್ಟಾರ್ಥವನ್ನು ಪಡೆಯುತ್ತೇವೆ. ಈ ಸಂದರ್ಭದಲ್ಲಿ ನಮಗೆ ಪ್ರೀತಿಯಾದ ದೇವರ ಜ್ಞಾನವೆ ಋಗ್ವೇದದ ತತ್ವ. ಆರಾಧನಾಕ್ರಿಯೆಯೆ ಯಜುರ್ವೇದದ ತತ್ವ. ನಮ್ರತೆಯಿಂದ ಸ್ತೋತ್ರಮಾಡಿ ಪ್ರಾರ್ಥನೆ ಮಾಡುವಿಕೆಯೆ ಸಾಮವೇದದ ತತ್ವ. ಇಷ್ಟಾರ್ಥವನ್ನು ಪಡೆಯುವ ಮಂಗಳ ರೂಪವೆ ಅಥರ್ವಣ ವೇದದ ತತ್ವ. ಇದರಂತೆಯೆ ಮಹಾತ್ಮನನ್ನು ಸೇವೆಮಾಡಿ ಅವನ ಪ್ರೀತಿಯನ್ನು ಸಂಪಾದಿಸಿ ಅವನಿಂದ ಪಾರಮಾರ್ಥಿಕ ಪ್ರಯೋಜನವನ್ನು ಪಡೆಯುವಿಕೆಯು ನಾಲಕ್ಕು ವೇದಗಳ ತತ್ವದ್ದಾಗಿದೆ. ಕೊನೆಗೆ ಲೋಕ ವ್ಯವಹಾರದಲ್ಲಿ ಒಬ್ಬರನ್ನು ಆಶ್ರಯಿಸಿ ನಮ್ಮ ಪ್ರಯೋಜನವನ್ನು ಪಡೆಯುವಿಕೆಯೂ ಸಹ ನಾಲಕ್ಕು ವೇದಗಳ ತತ್ವಗಳಿಗನುಸಾರವಾಗಿ ಇರುವುದು. ಈ ಮೇಲಿನವುಗಳೆಲ್ಲಾ ಕರ್ಮಮಾರ್ಗಕ್ಕೆ ಸೇರಿದವುಗಳಾಗಿವೆ. ನಾಲಕ್ಕು ವೇದಗಳ ತತ್ವಗಳನ್ನು ಜ್ಞಾನ ಮಾರ್ಗಕ್ಕೆ ಅನ್ವಯಿಸಬೇಕಾದಲ್ಲಿ ಆಯಾ ವೇದಗಳ ಮಹಾ ವಾಕ್ಯಗಳನ್ನು ಅನ್ವಯಿಸಿ ತಿಳಿದುಕೊಳ್ಳಬೇಕಾಗಿದೆ. ಇದನ್ನು ಅರಿಯಲು ಮುಂದುವರಿಯೋಣ.

ಪುಣ್ಯ ಪರಿಪಾಕದಿಂದ ಒಬ್ಬ ಮನುಷ್ಯನು ಜನನ ಮರಣ ಪ್ರವಾಹರೂಪವಾದ ಈ ಭವ ಬಂಧನವನ್ನು ಪರಿಹರಿಸಿಕೊಳ್ಳಬೇಕೆಂಬ ಅಪೇಕ್ಷೆಯಿಂದ ಸದ್ಗುರುವಿಗೆ ಶರಣಾಗತನಾಗಿ ಆತ್ಮ ತತ್ವವನ್ನು ಉಪದೇಶಿಸ ಬೇಕೆಂದು ಅವನನ್ನು ಕೇಳಿಕೊಳ್ಳುತ್ತಾನೆ. ಸದ್ಗುರುವು ಆ ಶಿಷ್ಯನಿಗೆ ತತ್ವೋಪದೇಶಮಾಡುತ್ತಾನಷ್ಟೆ. ಯಾವ ಆಧಾರದ ಮೇಲೆ ತತ್ವೋಪದೇಶವನ್ನು ಮಾಡುವನೆಂದರೆ 'ತತ್ವಮಸಿ' ಅಂದರೆ, ತತ್ ಆ

ಪರಬ್ರಹ್ಮನೆ, ತ್ವಂ-ನೀನು, ಅಸಿ- ಆಗಿರುತ್ತೀಯೆ ಎಂಬುದನ್ನು ತಿಳಿಯಪಡಿಸುವ ಉದ್ದೇಶವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಅದಕ್ಕೆ ಪೂರ್ವಭಾವಿಯಾಗಿ ಯಾವ ಯಾವ ವಿಚಾರಗಳನ್ನು ಹೇಗೆ ಹೇಗೆ ಬೋಧೆ ಮಾಡಬೇಕೋ ಹಾಗೆ ಮಾಡುತ್ತಾನೆ. ತತ್ ಅಂದರೆ ಪರಬ್ರಹ್ಮ. ಪರಬ್ರಹ್ಮನ ವಿಚಾರವನ್ನು ಬೋಧೆ ಮಾಡುತ್ತಾನೆ. ಇದರಂತೆಯೇ 'ತ್ವಂ' ಎಂದರೆ ನೀನು. ನೀನೆಂದರೆ ಯಾವುದೆಂದು ಗುರುವು ಶಿಷ್ಯನನ್ನು ಕೇಳುತ್ತಾನೆ. ಶಿಷ್ಯನು 'ನಾನು' ಎಂಬುವುದೇ ದೇಹ ಎಂದು ಉತ್ತರ ಹೇಳುತ್ತಾನೆ. ನನ್ನ ದೇಹ ಎಂದು ನೀನು ಹೇಳಿಕೊಳ್ಳುತ್ತೀಯಾದ್ದರಿಂದ ದೇಹಕ್ಕಿಂತ ನೀನು ಎಂಬುದು ಬೇರೆಯಾಯಿತಲ್ಲಾ- ಅದುಯಾವುದೆಂದರೆ ಶಿಷ್ಯನಿಗೆ ಉತ್ತರ ಹೇಳಲು ತಿಳಿಯಲಿಲ್ಲ. ತ್ವಂ ಪದದ ವಿಚಾರವನ್ನು ತಿಳಿಸಲು ಪಂಚ ಭೂತಗಳ, ಪಂಚ ಕೋಶ-ಗಳ ವಿಚಾರ, ಮನುಷ್ಯನಿಗೆ ಸುಖದುಃಖಗಳು ಬರುವವಿಚಾರ, ಅವಿದ್ಯೆಯಿಂದ ಉಂಟಾಗಿರುವ ಬಂಧನದ ವಿಚಾರಗಳೆಲ್ಲವನ್ನೂ ಬೋಧೆ ಮಾಡಿದುದಲ್ಲದೆ, ತಾನು ದೇಹವಲ್ಲ, ಪರಬ್ರಹ್ಮವೇ ತಾನೆಂಬ ತಿಳುವಳಿಕೆಯು ಶಿಷ್ಯನಿಗೆ ಚೆನ್ನಾಗಿ ಅಂಕುರಿಸು ವಂತೆ ಶಿಷ್ಯನಿಗೆ ಗುರುವು ಬೋಧೆ ಮಾಡುತ್ತಾನೆ.

ಗುರುವು 'ತತ್ವಮಸಿ' ಮಹಾವಾಕ್ಯದ ತತ್ವವನ್ನು ಶಿಷ್ಯನಿಗೆ ಉಪದೇಶ ಮಾಡಿದ್ದರಿಂದ ಶಿಷ್ಯನಿಗೆ 'ಅಹಂ ಬ್ರಹ್ಮಾಸ್ಮಿ' ಯ ತತ್ವವು ಮನಸ್ಸಿಗೆ ಅಂಕುರಿಸಿತು. ಅಂದರೆ ದೇಹ ನಾನಲ್ಲ, ಬ್ರಹ್ಮ ನಾನು ಎಂಬ ತಿಳುವಳಿಕೆಯು ಉದಯವಾಯಿತು. ಇದನ್ನು ಅರಿತ ಗುರುವು ಸಂತೋಷದಿಂದ ಶಿಷ್ಯನಿಗೆ ಮುಂದಿನ ಕ್ರಮವನ್ನು ಉಪದೇಶ ಮಾಡಲು ಪ್ರಾರಂಭಿಸುತ್ತಾನೆ. ''ಅಯ್ಯ ಪ್ರಿಯ ಶಿಷ್ಯೋತ್ತಮನೆ, ನನ್ನ ಉಪದೇಶ ದಿಂದ ದೇಹ ನಾನಲ್ಲ, ಬ್ರಹ್ಮ ನಾನು' ಎಂಬ ತತ್ವದ ತಿಳುವಳಿಕೆಯು ನಿನ್ನಲ್ಲಿ ಉದು ಯಿಸಿತು. ಇದನ್ನು ಚೆನ್ನಾಗಿ ಮನನಮಾಡಿ ದೃಢಪಡಿಸಿಕೊ. ಮುಂದೆ ಇದನ್ನು ನೀನ-ಅನುಭವದಿಂದ ಅನುಭವಿಸಲು ಮಾಡಬೇಕಾಗಿರುವ ಕಾರ್ಯಗಳ ತತ್ವವನ್ನು ನಿನಗೆ ಉಪದೇಶಿಸುತ್ತೇನೆ." ಎಂದು ಹೇಳಿ ಉಪದೇಶಿಸಲು ಪ್ರಾರಂಭಿಸಿದನು.

ನಿನ್ನಲ್ಲಿ ಉದಯವಾಗಿರುವ ದೇಹ ನಾನಲ್ಲ, ಬ್ರಹ್ಮ ನಾನು ಎಂಬ ತಿಳುವಳಿಕೆ-ಯು (ಜ್ಞಾನವು) ಅನುಭವಕ್ಕೆ ಬರಲು ಅವಿದ್ಯೆಯು ಅಡ್ಡಲಾಗಿದೆ. ಹೇಗೆಂದರೆ ನಾನು ಎಂಬ ನಿನ್ನ ಜ್ಞಾನವನ್ನು ನಿದ್ರಾಕಾಲದಲ್ಲಿ ತಮಸ್ಸು ಮುಚ್ಚಿಕೊಳ್ಳುವುದು. ಎಚ್ಚರಕಾಲದಲ್ಲಿ ನೀನು ಅಥವಾ ಇದು ಎಂಬ ಎರಡನೆಯದರ ಜ್ಞಾನಕ್ಕೆ ಅವಿದ್ಯೆಯು ಎಳೆಯುತ್ತಿರುವುದರಿಂದ 'ನಾನು' ಎಂಬ ಜ್ಞಾನದಲ್ಲೇ ನೀನು ನಿಲ್ಲಲು ಸಾಧ್ಯವಿಲ್ಲ. 'ನಾನು' ಎಂಬ ಜ್ಞಾನದಲ್ಲಿ ನೀನು ನಿಂತಾಗ ಪರಬ್ರಹ್ಮನಲ್ಲಿ ಅಭೇದವಾಗಿ ನೀನು

ಕೋಶದಿಂದ ಪ್ರಾಣಮಯ ಕೋಶಕ್ಕೂ, ಅಲ್ಲಿಂದ ಮನೋಮಯ ಕೋಶಕ್ಕೂ, ಮನೋಮಯ ಕೋಶದಿಂದ ವಿಜ್ಞಾನಮಯ ಕೋಶಕ್ಕೆ ಹತ್ತಿ ನೀನು ನಿಲ್ಲಬೇಕು. ಅಂದರೆ ಬೆನ್ನಿನ ಹುರಿಯಲ್ಲಿರುವ ಸುಷುಮ್ನಾ ಮಾರ್ಗದಲ್ಲಿ ಮೂಲಾಧಾರ ಚಕ್ರ ದಿಂದ ಸ್ವಾಧಿಷ್ಠಾನ ಚಕ್ರಕ್ಕೂ, ಅಲ್ಲಿಂದ ಮಣಿಪೂರ ಚಕ್ರಕ್ಕೂ, ಅಲ್ಲಿಂದ ಅನಾಹತ ಚಕ್ರಕ್ಕೂ, ಅಲ್ಲಿಂದ ವಿಶುದ್ಧ ಚಕ್ರಕ್ಕೂ, ಅಲ್ಲಿಂದ ಆಜ್ಞಾಚಕ್ರಕ್ಕೂ ಹತ್ತಿ ಅಲ್ಲಿ ನಿಂತಾಗ ಎರಡನೆಯದರ ಜ್ಞಾನವು ನಶಿಸಿ 'ನಾನು' ಎಂಬ ಜ್ಞಾನಮಾತ್ರ ನಿಲ್ಲುವುದು, ಆಗ ನಾನು ಎಂಬ ಜ್ಞಾನವನ್ನು ಪರಬ್ರಹ್ಮನಲ್ಲಿ ಅಭೇದವಾದ ಸೇರಿಸಬಲ್ಲೆ

ಆಜ್ಞಾಚಕ್ರದವರೆಗೂ ಅವಿದ್ಯಾ ತೊಂದರೆಯು ಇದ್ದೇ ಇರುವುದು. ಈ ಅವಿದ್ಯಾ ತೊಂದರೆಯನ್ನು ಪರಿಹರಿಸಿಕೊಳ್ಳಲು ನಿಧಿಧ್ಯಾಸವೆಂದರೆ ಅಷ್ಟಾಂಗ ಯೋಗಮಾರ್ಗದ ಆಸನ ಪ್ರಾಣಾಯಾಮ ಪ್ರತ್ಯಾಹಾರ, ಧ್ಯಾನ, ಧಾರಣಗಳ ಅನುಷ್ಠಾನಗಳನ್ನೂ, ಓಂಕಾರೋಪಾಸನೆಯಿಂದ ಧ್ಯಾನ ಮಾಡುವ ಕ್ರಮವನ್ನೂ ಶಿಷ್ಯ ನಿಗೆ ಅಭ್ಯಸಿಸಿ ಉಪದೇಶಮಾಡಿದನು. ಅಲ್ಲದೆ ಧ್ಯಾನಮಾರ್ಗದಲ್ಲಿ ಅನ್ನಮಯ ಕೋಶದಿಂದ ವಿಜ್ಞಾನಮಯ ಕೋಶಕ್ಕೆ ಹತ್ತುವುದೆಂದರೆ ಮೂಲಾಧಾರ ಚಕ್ರದಿಂದ ಆಜ್ಞಾಚಕ್ರಕ್ಕೆ ಹತ್ತುವವರೆಗೆ ಯಾವ ಯಾವ ಚಕ್ರಗಳಲ್ಲಿ ಅವಿದ್ಯಾ ಶಕ್ತಿಗಳು ಎಂತೆಂತಹ ತೊಂದರೆಗಳನ್ನು ಕೊಡುತ್ತವೆಂಬುದನ್ನು ಅವುಗಳನ್ನು ಪರಿಹರಿಸಿಕೊಳ್ಳುವ ಕ್ರಮವನ್ನೂ ವಿವರವಾಗಿ ಉಪದೇಶಿಸಿದನು. ನಂತರ ಎಲೈ ಪ್ರಿಯ ಶಿಷ್ಯನೇ, ನಾನು ಉಪದೇಶಿಸಿರುವ ವಿವರವನ್ನೇ ಚೆನ್ನಾಗಿ ಮನಸ್ಸಿನಲ್ಲಿಟ್ಟುಕೊಂಡು ನಿವೃತ್ತಿಮಾರ್ಗಕ್ಕೆ ಅಧಿದೇವತೆಯಾದ ಪರಾಶಕ್ತಿಯಾದ ಶ್ರೀ ಕುಂಡಲಿನೀ ಶಕ್ತಿಯನ್ನು ಪ್ರಾರ್ಥಿಸುತ್ತಾ, ಪ್ರಜ್ಞಾನಂ ಬ್ರಹ್ಮ, ಅಹಂಬ್ರಹ್ಮಾಸ್ಮಿ. ತತ್ವಮಸಿ, ಅಯಮಾತ್ಮಾ ಬ್ರಹ್ಮ ಎಂಬ ನಾಲಕ್ಕು ವೇದಗಳ ಮಹಾವಾಕ್ಯಗಳ ತತ್ವಸ್ವರೂಪವಾಗಿರುವ ಮಹತ್ತಾದ ಜ್ಞಾನ ಯಜ್ಞದ ಕರ್ಮವನ್ನು ನೀನು ಧೈರ್ಯದಿಂದಲೂ, ವಿವೇಕದಿಂದಲೂ, ಪರಬ್ರಹ್ಮತ್ವ ವನ್ನು ಪಡೆಯಬೇಕೆಂಬ ಪರಾಭಕ್ತಿಯಿಂದಲೂ ಆಚರಿಸು, ನಿನಗೆ ಶ್ರೇಯಸ್ಸಾಗುವು ದೆಂದು ಗುರುವು ಶಿಷ್ಯನಿಗೆ ಉಪದೇಶಿಸಿ ಆಶೀರ್ವದಿಸಿದನು.

ಶಿಷ್ಯನು ಗುರುವಿನ ಪಾದಾರವಿಂದಗಳಿಗೆ ಸಾಷ್ಟಾಂಗ ನಮಸ್ಕಾರಮಾಡಿ ಜ್ಞಾನ ಯಜ್ಞದ ಕರ್ಮವನ್ನು ಪ್ರಾರಂಭಿಸಿದನು. ದೇವತೆಗಳ ಪ್ರೀತ್ಯರ್ಥವಾಗಿ ಮಾಡುವ ಕರ್ಮಯಜ್ಞದಲ್ಲಿ ಋಗ್ವೇದದ ತತ್ವದ ಕಾರ್ಯ ಮಾಡುವವನಿಗೆ ಹೋತೃವೆಂದೂ, ಯಜುರ್ವೇದದ ತತ್ವದವನಿಗೆ ಅಧ್ವರ್ಯುವೆಂದೂ, ಸಾಮವೇದದ ತತ್ವದವನಿಗೆ ಉದ್ಗಾತೃವೆಂದೂ, ಅಥರ್ವಣ ವೇದದ ತತ್ವದವನಿಗೆ ಬ್ರಹ್ಮವೆಂದೂ ಹೆಸರುಗಳಿರು ವುವು. ಇವುಗಳಲ್ಲದೆ ಇನ್ನೂ ಕೆಲವು ಪಾತ್ರಗಳು ದೇವತೆಗಳ ಯಜ್ಞಕರ್ಮದಲ್ಲಿ

ಇರುವುವು. ಈ ವಿವರಣೆಗಳನ್ನೆಲ್ಲಾ ದೇಹದಲ್ಲಿ ಅನ್ವಯಿಸಿ ಜ್ಞಾನಮಾರ್ಗದ ವಿಚಾರವನ್ನು ಇನ್ನೂ ಲಂಭಿಸಬಹುದು. ಸಧ್ಯಕ್ಕೆ ಇದು ನನ್ನ ಉದ್ದೇಶವಲ್ಲ. ಜ್ಞಾನ ಯಜ್ಞದ ವಿಚಾರವನ್ನು ವಿವರಿಸೋಣ.

ಮುಮುಕ್ಷುವಾದ ಶಿಷ್ಯನು ಸದ್ಗುರುವಿನಲ್ಲಿ ಆತ್ಮ ತತ್ವವನ್ನು ಶ್ರವಣ ಮಾಡುವಿಕೆಯೇ ಸಾಮವೇದದ ತತ್ವ. ಸಾಮವೇದವು ಋಗ್ವೇದದ ಅಂಶವಾಗಿದೆ. ಅಂದರೆ ಸಾಮವೇದವು ಇಚ್ಛಾಶಕ್ತಿಗೆ ಸೇರಿದುದು. ಇಚ್ಛೆಯು ಜ್ಞಾನಶಕ್ತಿಯ ಅಂಶವೇ ಹೊರತು ಕ್ರಿಯಾಶಕ್ತಿಗೆ ಸೇರಿದುದಲ್ಲ. ಆದುದರಿಂದ ಆತ್ಮ ತತ್ವದ ಭೋದನೆಯೂ ಮತ್ತು ಶ್ರವಣವೂ ಜ್ಞಾನಶಕ್ತಿಗೆ ಸೇರಿದುದು. ಆದರೆ ಬೋಧನೆ ಮತ್ತು ಶ್ರವಣಗಳಲ್ಲಿ ಕೊಂಚ ಕ್ರಿಯೆಯೂ ಇರುವುದರಿಂದ ಯಜುರ್ವೇದದ ಅಂಶವೂ ಕೊಂಚ ಇರುವುದು. ಸಾಮಪದದ ಅರ್ಥವು "ಸಾಂತ್ವೇ ಸಾಂತ್ವಃ ಪ್ರಿಯಕರಣಂ" ಅತ್ಯಂತ ಪ್ರಿಯವಾದ ನುಡಿ ಎಂದು ಅರ್ಥವಾಗುವುದು. ಆದುದರಿಂದ ಗುರುವಿನಿಂದ ಶಿಷ್ಯನಿಗೆ ಬೋಧೆ ಮಾಡುವ ‘ತತ್ವಮಸಿ’ ಅಂದರೆ ಆ ಪರಬ್ರಹ್ಮವೇ ನೀನು ಎಂಬ ಮಹಾ ವಾಕ್ಯದ ತತ್ವಗಳೆಲ್ಲಾ ಅತ್ಯಂತ ಪ್ರಿಯವಾದದ್ದಾಗಿರುತ್ತವೆ.

ಗುರುವು ಆತ್ಮ ತತ್ವವನ್ನು ಬೋಧನೆಮೂಲಕ ಉಪದೇಶ ಮಾಡಿದನಂತರ, ತತ್ವವಿಚಾರಗಳ ಅನುಭವವನ್ನು ಹೊಂದಲು ಅನುಷ್ಠಾನದ ಕ್ರಮವನ್ನು ಉಪದೇಶ ಮಾಡಿರುತ್ತಾನೆ. ಶಿಷ್ಯನು ಅನುಷ್ಠಾನ ಮಾಡುವಿಕೆಯು ಕ್ರಿಯಾಶಕ್ತಿಸ್ವರೂಪವಾದುದರಿಂದ ಯಜುರ್ವೇದದ ತತ್ವವನ್ನು ಅವಲಂಬಿಸಿದಂತಾಗುವುದು. ‘ಯಜು, ಶಬ್ದಕ್ಕೆ "ಇಜ್ಯತೇ ಅನೇನೇತಿ ಯಜುಃ ಯಜದೇವ ಪೂಜಾ ಸಂಗತಿ ಕರಣದಾನೇಷು" ಅಂದರೆ ದೇವತೆಗಳ ಪ್ರೀತ್ಯರ್ಥವಾಗಿ ಮಾಡುವ ಯಜ್ಞಕರ್ಮವನ್ನು ನಿರೂಪಿಸುವುದು ಯಜುರ್ವೇದವು. ಅಲ್ಲದೆ ಯಜುರ್ವೇದದ 36 ನೆಯ ಅದ್ಯಾಯದಲ್ಲಿ ‘ಮನೋ ಯಜುಃ ಪ್ರಸದ್ಯೇ’ ಎಂಬ ಮಂತ್ರಕ್ಕೆ ನಾನು ಮನಸ್ಸನ್ನು ತೆಗೆದುಕೊಂಡು ಯಜುರ್ವೇದವನ್ನು ಶರಣು ಹೊಂದುತ್ತೇನೆ. ಎಂದಿದೆ. ಅಂದರೆ ಮನಸ್ಸೇ ಸರ್ವಕಾರ್ಯ ಪ್ರವರ್ತನೆಗೂ ಮುಖ್ಯವಾದ್ದರಿಂದ ಯಜ್ಞಕರ್ಮಮಾಡುವ ಕ್ರಿಯಾರೂಪವೇ ಆಗಿದೆ. ಆದುದರಿಂದ ಶಿಷ್ಯನು ಯಜುರ್ವೇದದ ತತ್ವವನ್ನು ಅವಲಂಭಿಸಿದನೆಂದರೆ ಜ್ಞಾನ ಯಜ್ಞಕ್ಕೆ ಸೇರಿದ ಯೋಗಾನುಷ್ಠಾನದ ಕಾರ್ಯ ಪ್ರವರ್ತಕನಾದನೆಂಬ ತತ್ವವೇ ಆಗಿದೆ.

ಆತ್ಮ ತತ್ವಗಳನ್ನು ಅರಿಯುವ ಮತ್ತು ಅನುಭವಕ್ಕೆ ತಂದುಕೊಳ್ಳುವ ಅನುಷ್ಠಾನಾದ ಮಾರ್ಗದಲ್ಲಿ ಯಾವ ಯಾವ ಯಜ್ಞದ ತತ್ವಗಳು ಇರುವುದೆನ್ನುವುದಕ್ಕೆ ಭಗವದ್ಗೀತಾ 4ನೇ ಅಧ್ಯಾಯ 28ನೆಯ ಶ್ಲೋಕದಲ್ಲಿ ಹೇಳಿರುವ ದ್ರವ್ಯಯಜ್ಞ, ತಪೋಯಜ್ಞ, ಪ್ರವೇಶಿಸಬಹುದು. ನಾನು ಎಂಬ ಜ್ಞಾನವಶ್ಲೇ ನೀನು ನಿಲ್ಲಬೇಕಾದರೆ ಅನ್ನಮಯ

ಯೋಗಯಜ್ಞ, ಜ್ಞಾನಯಜ್ಞ, ಸ್ವಾಧ್ಯಾಯ ಯಜ್ಞಗಳೆಂಬ ಐದು ವಿಧವಾದ ಯಜ್ಞಗಳಿವೆ. ಇವುಗಳಲ್ಲಿ ದ್ರವ್ಯಯಜ್ಞ ವಿನಹಾ ನಾಲ್ಕು ಯಜ್ಞಗಳ ತತ್ವಗಳು ಆತ್ಮ ತತ್ವವನ್ನು ಅರಿಯುವ ಮತ್ತು ಅನುಭವಕ್ಕೆ ತಂದುಕೊಳ್ಳುವ ಮಾರ್ಗದಲ್ಲಿ ಇರುತ್ತವೆ ಸ್ವಾಧ್ಯಾಯ ಯಜ್ಞವೆಂದರೆ ಬ್ರಹ್ಮಚರ್ಯಾಶ್ರಮದಲ್ಲಿ ತಾನು ಯಾವ ವೇದದ ಶಾಖೆಗೆ ಸೇರಿದವನೋ ಆ ವೇದಮಂತ್ರವನ್ನು ಅಧ್ಯಯನ ಮಾಡುವಿಕೆಗೆ ಸೇರಿದುದು. ಆತ್ಮ ತತ್ವವಿಚಾರದಲ್ಲೂ ಸ್ವಶಾಖಾ, ಅಂದರೆ ಸ್ವ- ತನನ್ನು ತಾನು ತಿಳಿಯುವ ಆತ್ಮ ತತ್ವವಿಚಾರವನ್ನು ಗುರುಮುಖೇನ ಉಪದೇಶ ತೆಗೆದುಕೊಳ್ಳುವಿಕೆಯು ಸ್ವಾಧ್ಯಾಯ ಯಜ್ಞವೆನಿಸುವುದು. ಈ ಯಜ್ಞದ ತತ್ವವು ಮೇಲೆ ಬಂದಿರವುದು. ಯೋಗ ಯಜ್ಞ, ತಪೋಯಜ್ಞ, ಜ್ಞಾನಯಜ್ಞಗಳ ವಿಚಾರಗಳು ಮುಂದಿನ ತತ್ವಗಳಲ್ಲಿ ಬರುವುವು. 28ನೇ ಶ್ಲೋಕದಲ್ಲಿ ಎಷ್ಟು ವಿಧವಾದ ಯಜ್ಞಗಳಿವೆಯೆಂ ತಿಳಿಸಿ ನಂತರ 29 ಮತ್ತು 30 ನೆ ಶ್ಲೋಕಗಳಲ್ಲಿ ಯೋಗ ಯಜ್ಞದ ಪ್ರಾಣಾಯಾಮಾನುಷ್ಠಾನಾದ ವಿಚಾರವನ್ನೇ ಪ್ರಥಮದಲ್ಲಿ ತಿಳಿಸಿರುತ್ತಾನೆ.

ಯೋಗಾನುಷ್ಠಾನದ ಮಾರ್ಗಕ್ಕೆ ಪ್ರಥಮವಾದುದೇ ಪ್ರಾಣಾಯಾಮ. ಪ್ರಾಣವೆಂದರೆ ಸ್ಪಂದನ ಶಕ್ತಿ. ಪರಾಶಕ್ತಿಯಾದ ಅಃ ಅಕ್ಷರಶಕ್ತಿಯೆ ಮುಖ್ಯ ಪ್ರಾಣಶಕ್ತಿಯಾಗಿ ಶ್ರೀ ಕುಂಡಲಿನೀ ಶಕ್ತಿ ರೂಪದಿಂದ ಮೂಲಾಧಾರ ಚಕ್ರದಲ್ಲಿ ಇದ್ದುಕೊಂಡು ಸೂರ್ಯ ಚಂದ್ರರುಗಳಿಂದ ಸೂರ್ಯ ಚಂದ್ರ ನಾಡಿಗಳ ಮೂಲಕವಾಗಿ ಯಾತಾಯಾತ ರೂಪದಿಂದ ಸ್ಪಂದನವನ್ನುಂಟು ಮಾಡಿಸುತ್ತಾ ಈ ಸ್ಪಂದನದಿಂದ ಶ್ವಾಸೋಚ್ಛ್ವಾಸಗಳನ್ನು ಉಂಟುಮಾಡುತ್ತಲೂ ಪಂಚಪ್ರಾಣಗಳ ಕಾರ್ಯಗಳನ್ನು ಮಾಡಿಸುತ್ತಲೂ ಇದೆಯೆಂದು ಹಿಂದೆಯೇ ತಿಳಿಸಿದೆ. ಇದು ದೇಹ ವ್ಯಾಪಾರದ ಕಾರ್ಯಕ್ಕೆ ಸೇರಿದುದು. ಮೋಕ್ಷ ಮಾರ್ಗದ ಕ್ರಮದಲ್ಲಿ ಶ್ರೀ ಕುಂಡಲಿನೀ ಶಕ್ತಿಯು ಸೂರ್ಯ ಚಂದ್ರರಿಂದಾಗುವ ಯಾತಾಯಾತ ರೂಪವಾದ ಸ್ಪಂದನ ಶಕ್ತಿಯನ್ನು ಉಪಸಂಹರಿಸಿಕೊಳ್ಳಲು ಮತ್ತು ಸುಷುಮ್ನಾ ನಾಡಿಯ ಮಾರ್ಗದಲ್ಲಿ ಅವಿದ್ಯಾ ಶಕ್ತಿಗಳನ್ನೆಲ್ಲಾ ನಿಗ್ರಹಿಸಲು ಮೂಲಾಧಾರಾದಿ ಆರು ಚಕ್ರಗಳನ್ನು ಭೇದಿಸಿಕೊಂಡು ನೆತ್ತಿಯಲ್ಲಿರುವ ಬಿಳಿಯದಾದ ಸಹಸ್ರಾರ ಕಮಲವನ್ನು ಸೇರಬೇಕು. ಈ ಸ್ಥಳದಲ್ಲ ಅಃ ಅಕ್ಷರ ತತ್ವವಾದ ಪರಾಶಕ್ತಿಯ ಕ್ರಿಯಾ ಶಕ್ತಿಯೂ ಅಂ ಅಕ್ಷರದ ತತ್ವವಾದ ಜ್ಞಾನ ಶಕ್ತಿಯೂ ಒಂದಾಗಿ ಪರಬ್ರಹ್ಮನೆನಿಸಿಕೊಳ್ಳುವರು. ಅಂದರೆ ಐತರೇಯೋಪನಿಷತ್ತಿನಲ್ಲಿ ಹೇಳಿರುವ ಮುಂಗಾಲು ಮೂಲಕವಾಗಿ ಪ್ರವೇಶಿಸಿ ಪ್ರಾಣರೂಪವಾದ ಆತ್ಮನು (ಪರಬ್ರಹ್ಮನು) ಮತ್ತು ನೆತ್ತಿಯಲ್ಲಿ ಪ್ರವೇಶಿಸಿದ ಅಂತಃಕರಣವಲ್ಲಿರುವ ಆತ್ಮನು (ಪರಬ್ರಹ್ಮನು) ಒಂದಾಗಿ ಸೇರುವಿಕೆಯು ಸ್ಥಿತಿಯಾಗಿರುವುದು. ಇದೆ ಮೋಕ್ಷದ ಸ್ಥಿತಿ.

ಪ್ರಾಣಸ್ಪಂದನದ ಸ್ಥಿತಿಯನ್ನು ನಿಲ್ಲಿಸಿಕೊಳ್ಳಲು ಗೀತಾ 4ನೇ ಅಧ್ಯಾಯದ 29ನೇ ಶ್ಲೋಕದಲ್ಲಿ ತಿಳಿಸುವ ತತ್ವದ ರೇಚಕ ಪೂರಕ ಕುಂಭಕ ಮತ್ತು ಕುಂಡಲಿನೀ ಶಕ್ತಿಯು ಉತ್ಥಾಪಿತ ವಾಗುವಂತಹ ಪ್ರಾಣಾಯಾಮಗಳನ್ನು ಗುರುವು ಉಪದೇಶಿಸಿ ದಂತೆ ಅನುಷ್ಠಿಸ ಬೇಕು. 30ನೇ ಶ್ಲೋಕದಲ್ಲಿ ಹೇಳಿರುವ "ಅಪರೇನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ" ಎಂಬುದರಲ್ಲಿ ಬಹು ಗಹನವಾದ ಅನುಷ್ಠಾನದ ತತ್ವಗಳು ಗೋಪ್ಯವಾಗಿ ಅಡಗಿವೆ. ಪ್ರಾಣಾನ್- ದೇಹದಲ್ಲಿರುವ ಸರ್ವ ಸ್ಪಂದನ ಶಕ್ತಿಗಳ ರೂಪವಾಗಿ ಇರುವ ಶ್ರೀ ಕುಂಡಲಿನೀ ಶಕ್ತಿಯನ್ನು, ಪ್ರಾಣೇಷು-ಸರ್ವಪ್ರಾಣ ಶಕ್ತಿಗಳಿಗೂ ಮೂಲವಾಗಿರುವ ಸರ್ವಪ್ರಾಣ ಶಕ್ತಿಗಳುಳ್ಳ ಪರಬ್ರಹ್ಮದಲ್ಲಿ, ಜುಹ್ವತಿ- ಓಂಕಾರೋಪಾಸನೆಯ ಮೂಲಕ ಹೋಮ ಮಾಡುತ್ತಾರೆ, ಎಂಬುದು ಸೂಕ್ಷ್ಮವಾದ ಅರ್ಥ. ಈ ವಿಚಾರಗಳಿಗೆ ಇತರ ಆಧಾರ ವಾಕ್ಯಗಳನ್ನು ಉದಹರಿಸಿ ತತ್ವವನ್ನು ಚೆನ್ನಾಗಿ ತಿಳಿದುಕೊಳ್ಳೋಣ. ಅಥರ್ವಶಿಖೋಪನಿಷತ್ತಿನಲ್ಲಿ "ಪ್ರಾಣಾನ್ಸರ್ವಾ ನ್ಪರಮಾತ್ಮನಿ ಪ್ರಣಾಮಯತಿತ್ಯೇತಸ್ಮಾತ್ಪ್ರಣಃವ" ಸಕಲ ಪ್ರಾಣಗಳನ್ನು ಪರಮಾತ್ಮನಲ್ಲಿ ಸಾಷ್ಟಾಂಗ ಪ್ರಣಾಮ ರೂಪವಾಗಿ ಓಂಕಾರ ರೂಪದಿಂದ ಅರ್ಪಿಸುವುದರಿಂದ ಪ್ರಣವ ಅಥವಾ ಓಂಕಾರವೆಂದು ಪರಮಾತ್ಮನಿಗೆ ಹೆಸರು ಇದೆ. ಶ್ರೀ ಶಂಕರಾಚಾರ್ಯರವರು ಯೋಗತಾರಾವಳಿಯಲ್ಲಿ

**ಪ್ರತ್ಯಾಹೃತಃ ಕೇವಲ ಕುಂಭಕೇನ।**

**ಪ್ರಬುದ್ಧ ಕುಂಡಲ್ಯುಪ ಭುಕ್ತಶೇಷಃ॥**

**ಪ್ರಾಣಃ ಪ್ರತೀಚೀನ ಪಥೇನ ಮಂದಂ।**

**ವಿಲೀಯತೆ ವಿಷ್ಣು ಪದಾಂತರಾಲೇ॥**

ಶ್ವಾಸೋಚ್ಛ್ವಾಸವು ಸಮಸ್ಥಿತಿಯಲ್ಲಿರುವ ಕೇವಲ ಕುಂಭಕದಿಂದ ಬಿಂದು ಧಾರಣೆ ಸಹಿತವಾದ ಓಂಕಾರೋಪಾಸನೆಯ ಅಭ್ಯಾಸದಿಂದ ಶ್ರೀ ಕುಂಡಲಿನೀ ಶಕ್ತಿಯು ಸುಷುಮ್ನೆಯೊಳಗೆ ಎಷ್ಟೆಷ್ಟು ಪ್ರವೇಶ ಮಾಡುವುದೋ ಆದನ್ನು ಅನುಸರಿಸಿ ಪ್ರಾಣಶಕ್ತಿಗಳೂ ನಿಧಾನವಾಗಿ ಸಹಸ್ರಾರ ಕಮಲಕ್ಕೆ ಸೇರಿ ವಿಷ್ಣುಪದವೆಂದರೆ ಸರ್ವ ವ್ಯಾಪಿಯಾಗುವುದು ಎಂದು ಹೇಳಿರುವರು.

ಯೋಗ ಕುಂಡಲಿನಿ, ಯೋಗ ಚೂಡಾಮಣಿ ಮತ್ತು ಧ್ಯಾನ ಬಿಂದೂಪನಿಷತುಗಳಲ್ಲಿ 'ಕುಂಡಲಿನ್ಯಾತಥಾ ಯೋಗಿ ಮೋಕ್ಷ ದ್ವಾರಂ ವಿಭೇದಯೇತಾ' ಅಂದರೆ

ಯೋಗಿಯು ಮೋಕ್ಷದ ಬಾಗಿಲನ್ನು ತೆಗೆಯುವುದಕ್ಕೋಸ್ಕರ ಕುಂಡಲಿನಿಯನ್ನು ಉತ್ಥಾಪನೆ ಮಾಡಬೇಕೆಂದು ಹೇಳಿದೆ. ಶಾಂಡಿ ಲ್ಯೋಪನಿಷತ್ತಿನಲ್ಲಿ

**ಸಾ ಶಕ್ತಿರ್ಯೇನ ಚಲಿತಾ ಸ್ಯಾತ್ಸತು ಮುಕ್ತೋ ಭವತಿ।**
**ಸಾ ಕಂಠೋರ್ಧ್ವ ಭಾಗೆ ಸುಪ್ತಾಚೇದ್ಯೋ।**
**ಗಿನಾಂ ಮುಕ್ತಯೇ ಭವತಿ ಬಂಧ ನಾಯಾಥೋ ಮೂಢಾನಾಂ॥**

ಅಂದರೆ ಕುಂಲಿನೀ ಶಕ್ತಿಯನ್ನು ಯಾರು ಚಲನೆ ಮಾಡಿಸುತ್ತಾರೊ ಅವರು ಮುಕ್ತರಾಗುತ್ತಾರೆ. ಈ ಶಕ್ತಿಯು ಮನುಷ್ಯನ ಕಂಠದ ಮೇಲಕ್ಕೆ ಪ್ರವೇಶಿಸಿ ಮಲಗಿದರೆ ಅಧಿಕಾರಿಗೆ ಮುಕ್ತಿಯಾಗ್ತುವುದು. ಈ ಶಕ್ತಿಯನ್ನು ಚಲನೆ ಮಾಡಿಸದಿದ್ದರೆ ಮೂಢರಾಗಿ ಬಂಧನದಲ್ಲಿರುತ್ತಾರೆ. ಯೋಗ ಕುಂಡಲ್ಯುಪನಿಷತ್ತಿನಲ್ಲಿ

**ತತ್ಸಾಧನೇ ದ್ವಯಂ ಮುಖ್ಯಂ ಸರಸ್ವತ್ಯಾಸ್ತು ಚಾಲನಂ।**
**ಪ್ರಾಣರೋಧ ಮಥಾಭ್ಯಾಸ ದ್ಡ್ರುಜ್ವೀ ಕುಂಡಲಿನೀ ಭವೇತ್॥**

ಪರಮಾತ್ಮ ಸಾಕ್ಷಾತ್ಕಾರಕ್ಕೆ ಎರಡು ಸಾಧನಗಳು ಅವಶ್ಯಕ. ಒಂದನೆಯದು ಪ್ರಾಣಾಯಾಮದಿಂದ ಕುಂಡಲಿನಿಯನ್ನು ಎಬ್ಬಿಸುವುದು. ಎರಡನೆಯದು ಶ್ರೀ ಕುಂಡಲಿನೀಶಕ್ತಿಯು ಉತ್ಥಾಪಿತವಾದ ಅನಂತರ ಸರಸ್ವತೀಚಾಲನೆ ಯೆಂದರೆ ಓಂಕಾರೋಪಾಸನೆಯಿಂದ ಧ್ಯಾನ ಮಾಡುವಿಕೆ. ಈ ಯೋಗ ಸಾಧನೆಗೆ ಸಾತ್ವಿಕವಾದ ಮಿತವಾದ ಆಹಾರವು ಅತ್ಯವಶ್ಯಕ ವಾದುದರಿಂದಲೇ ಗೀತಾ 30 ನೇ ಶ್ಲೋಕದಲ್ಲಿ ನಿಯತಾಹಾರವೆಂದು ಹೇಳಿದೆ. ಪ್ರಾಣಾಯಾಮದ ಅನುಷ್ಠಾನದ ಸೋಪಾನವಾದ ನಂತರ ಸರಸ್ವತೀ ಚಾಲನವೆಂದರೆ ಓಂಕಾರ ವರ್ಣೋಚ್ಚಾರಣೆಯಿಂದ ಧ್ಯಾನಾಭ್ಯಾಸ ಮಾಡಬೇಕು. ಈ ಓಂಕಾರೋಪಸನೆಯ ವಿಚಾರಕ್ಕೆ ಮುಣ್ಡಕೋಪನಿಷತ್ತಿನಲ್ಲಿ

**"ಓಂ ಇತ್ಯೇವಂ ಧ್ಯಾಯಥಾತ್ಮಾನಂ ಸ್ವಸ್ತಿವಃ**
**ಪರಾಯ ತಮಸಃ ಪರಸ್ತಾತ್"**

ಅಂದರೆ ಎಲೈ ಪ್ರಿಯ ವಿದ್ಯಾರ್ಥಿಗಳಿರಾ ಪರಬ್ರಹ್ಮವನ್ನು ಓಂಕಾರೋಪಾಸನೆಯಿಂದ ಧ್ಯಾನಿಸಿರಿ. ಅವಿದ್ಯೆಯೆಂಬ ಅಂಧಕಾರವು ತೊಲಗಿ ನಿಮಗೆ ಬ್ರಹ್ಮಪ್ರಾಪ್ತಿಯಾಗುವುದರಲ್ಲಿ ಯಾವುದೊಂದು ವಿಘ್ನವೂ ಉಂಟಾಗಬೇಡ ಎಂದು ಹೇಳಿದೆ.

ಓಂಕಾರೋಚ್ಚಾರಣೆಯಿಂದ ಧ್ಯಾನ ಮಾಡುತ್ತಾ ಮೂಲಾಧಾರ ಚಕ್ರದಿಂದ ಮೇಲಕ್ಕೆ ಸಹಸ್ರಾರ ಕಮಲದವರಿಗೂ ಹೋಗಬೇಕಾಗಿದೆ. ಈ ಧ್ಯಾನಕ್ರಮದಲ್ಲಿ ಓಂಕಾರದಲ್ಲಿನ ಬಿಂದು, ನಾದ, ಕಳಾ, ಕಳಾತೀತ ಸೋಪಾನಗಳು ಕ್ರಮವಾಗಿ ಬರುವುವು. ಈ ಧ್ಯಾನ ಕ್ರಮದಲ್ಲಿ ಓಂಕಾರದಲ್ಲಿನ ಮೂಲಾಧಾರ ಚಕ್ರದಲ್ಲಿರುವ ಅಕಾರವು ಅನಾಹತ ಚಕ್ರದಲ್ಲಿರುವ ಉಕಾರದೊಡನೆ ಸೇರಿ ಓಕಾರ ವಾಗುವುದು. ಓಕಾರವು ಆಜ್ಞಾಚಕ್ರದಲ್ಲಿರುವ ಮಕಾರದೊಡನೆ ಸೇರಿ ಓಮ ಆಗುವುದು. ಈ ಓಮವು ಕಳಾದಲ್ಲಿರುವ ಅರ್ಧ ಮಾತ್ರಾ ರೂಪವಾದ ಅನುಸ್ವಾರದೊಡನೆ ಸೇರಿ ಓಂಕಾರವಾಗಿ ಪರಬ್ರಹ್ಮ ನೆನಿಸುವುದು. ಅಲ್ಲದೆ ಈ ಧ್ಯಾನ ಕ್ರಮದಲ್ಲಿ ಮೂಲಾಧಾರದಲ್ಲಿರುವ ಗಾರ್ಹಪತ್ಯಾಗ್ನಿಯು ಅನಾಹತದಲ್ಲಿರುವ ದಕ್ಷಿಣಾಗ್ನಿಯನು ಸೇರುವುದು. ಅನಾಹತದಲ್ಲಿ ಮಿಳಿತವಾದ ಗಾರ್ಹಪತ್ಯ ದಕ್ಷಿಣಾಗ್ನಿಗಳು ಆಜ್ಞಾ ಚಕ್ರದಲ್ಲಿರುವ ಆಹವನಿಯಾಗ್ನಿಯನ್ನು ಸೇರುವುವು. ಈ ಮೂರು ಅಗ್ನಿಗಳೂ ಮಿಳಿತವಾಗಿ ಕಳಾಸ್ಥಿತಿಯಲ್ಲಿ ಜ್ಞಾನಾಗ್ನಿ ಯೆನಿಸಿ ಅನಂತರ ಸಹಸ್ರಾರ ಕಮಲದಲ್ಲಿ ಸ್ವಯಂ ಪ್ರಕಾಶವಾದ ಪರಬ್ರಹ್ಮವಾಗುವುದು. ಈ ಓಂಕಾರೋಪಾಸನೆಯ ಧ್ಯಾನ ಕ್ರಮದಲ್ಲಿ ಬುದ್ಧಿ ಮನಸ್ಸಿನ ವೃತ್ತಿಗಳು ಬಿಂದು ನಾದಗಳನ್ನು ಧರಿಸಿಕೊಂಡು ಧ್ಯಾನಾಭಿವೃದ್ಧಿ ಪಡೆದು ಮೂಲಾಧಾರ ಚಕ್ರದಿಂದ ಮೇಲ ಮೇಲಕ್ಕೆ ಹತ್ತಿದಂತೆ ಅಃ ಅಕ್ಷರದ ಕ್ರಿಯಾಶಕ್ತಿಯಾಗಿ ಪರಾಶಕ್ತಿಯಾದ ಶ್ರೀ ಕುಂಡಲಿನಿ ಶಕ್ತಿಯೂ ಸಹ ದೇಹದಲ್ಲಿರುವ ಚಂದ್ರಶಕ್ತಿಯನ್ನು ತನ್ನಲ್ಲಿ ಸೇರಿಸಿಕೊಂಡು ಮೂಲಾಧಾರದಿಂದ ಮೇಲಕ್ಕೆ ಹತ್ತುತ್ತಾ ಆಯಾಯಾ ಚಕ್ರಗಳಿಗೆ ಸಂಬಂಧಪಟ್ಟ ರಜಸ್ತಮೋಗುಣಗಳ ಸ್ವರೂಪವಾದ ಅವಿದ್ಯಾಶಕ್ತಿಗಳನ್ನು ನಿಗ್ರಹಿಸುತ್ತಾ ಅನಾಹತ ಚಕ್ರದಲ್ಲಿ ಅಧೋ ಮುಖವಾಗಿ ಕಿರಣಗಳನ್ನು ಪ್ರಸರಿಸಿಕೊಂಡಿರುವ ಸೂರ್ಯನನ್ನು ಊರ್ಧ್ವ ಮುಖ ವಾಗಿ ಮಾಡಿ ಕಿರಣ ರಹಿತವಾದ ಅಗ್ನಿರೂಪಕ್ಕೆ ತಂದು ತನ್ನಲ್ಲಿ ಸೇರಿಸಿಕೊಂಡು ಆಜ್ಞಾಚಕ್ರವನ್ನು ಸೇರಿ ಅಂ ಅಕ್ಷರದೊಡನೆ ಸೇರಿ ಪತಿಯಾದ ಈಶ್ವರನನ್ನು ಸೇರಿಕೊಳ್ಳುವಳು.

ಈ ಮೇಲೆ ಬರೆದಿರುವ ಅನುಷ್ಠಾನದ ತತ್ವಗಳೆಲ್ಲಾ ಯೋಗಯಜ್ಞಕ್ಕೆ ಸೇರಿ ಯಜುರ್ವೆದದ ತತ್ವದಲ್ಲೆ ನಡೆಯುವುದು. ಅಂದರೆ ಈ ಅನುಷ್ಠಾನದಲ್ಲಿ ಕ್ರಿಯಾ ಶಕ್ತಿಯೆ ಪ್ರಧಾನವಾದದ್ದಾಗಿಯೂ ಜ್ಞಾನಶಕ್ತಿ ಮತ್ತು ಇಚ್ಛಾಶಕ್ತಿಗಳು ಸಹಾಯಕ ವಾಗಿಯೂ ಇರುವುವು. ಅಂದರೆ ಯಜುರ್ವೇದದ ಕಾರ್ಯವೇ ಪ್ರಧಾನವಾಗಿಯೂ ಋಗ್ವೇದ ಸಾಮವೇದಗಳ ಕಾರ್ಯಗಳು ಸಹಾಯಕವಾಗಿಯೂ ಇರುವುವು, 'ಅಹಂ ಬ್ರಹ್ಮಾಸ್ಮಿ' ಎನ್ನುವುದರಲ್ಲಿ ಅಹಂ ಎಂಬ ಜ್ಞಾನವು ದೇಹಸಂಬಧವಾಧ ವಿಜ್ಞಾನ ಮಯ ಕೋಶದಲ್ಲಿ ಬುದ್ಧಿಯಲ್ಲಿ ಉದಯಿಸುವುದು. ಆದ್ದರಿಂದ ಇದು ಮಲಿನ




ಸತ್ವಗುಣಕ್ಕೆ ಸೇರಿ ಅಧ್ಯಾಸದಿಂದ ( ತಪ್ಪು ತಿಳುವಳಿಕೆಯಿಂದ) ದೇಹವೇ ನಾನೆಂದು ಕೊಂಡಿತ್ತು. ಗುರುವಿನ ಉಪದೇಶದಂತೆ ದೇಹ ನಾನಲ್ಲ ಬ್ರಹ್ಮವೇ ನಾನೆಂಬುದನ್ನು ಪಡೆಯಲು ಧ್ಯಾನ ಮಾರ್ಗದಲ್ಲಿ ಪ್ರವೇಶಿಸಿರುವುದು. ಗುರುವಿನ ಉಪದೇಶರೂಪ ವಾದ ವಾಣಿಯು ಋಗ್ವೇದಕ್ಕೆ ಸೇರಿದುದು. ''ಋಚಂ ವಾಚಂ ಪ್ರಪದ್ಯೆ" ಎಂದು ಯಜುರ್ವೇದದ 36ನೆ ಅಧ್ಯಾಯದ ಮಂತ್ರದಲ್ಲಿದೆ. ಅಂದರೆ ಗುರುವಿನ ವಾಣಿಯು ಶಿಷ್ಯನ ಕಿವಿಗೆ ಬಂದಕೂಡಲೆ ಬೋಧೆ ರೂಪವಾಗುವುದು. ಋಗ್ವೇದ ತತ್ವವಾದ ಜ್ಞಾನಕ್ಕೂ ಯಜುರ್ವೇದ ತತ್ವವಾದ ಯೋಗಕ್ಕೂ ಸಂಬಂಧವು ಹೇಗಿರಬೇಕೆಂಬುದಕ್ಕೆ ಕೆಳಗಿನ ಎರಡು ಉಪನಿಷದ್ವಾಕ್ಯಗಳು ಬಹು ಮುದ್ದಾಗಿ ಅನ್ವಯವಾಗುವುವು. ಯೋಗಶಿಖೋಪನಿಷತ್ ಮತ್ತು ಯೋಗತತ್ವೋಪನಿಷತ್ತು ಗಳೆರಡರಲ್ಲಿಯೂ

**ಯೋಗಹೀನಂ ಕಥಂ ಜ್ಞಾನಂ ಮೋಕ್ಷದಂ ಭವತಿ ಧ್ರುವಂ।**
**ಯೋಗೋಽಪಿ ಜ್ಞಾನ ಹೀನಸ್ತು ನಕ್ಷಮೋ ಮೋಕ್ಷ ಕರ್ಮಣಿ।**
**ತಸ್ಮಾತ್ ಜ್ಞಾನಂ ಚ ಯೋಗಂಚ ಮುಮುಕ್ಷು ರ್ದೃಢಮಭ್ಯಸೇತ್।**

ತಾತ್ಪರ್ಯ॥ ಯೋಗಾನುಷ್ಠಾನವಿಲ್ಲದವನಿಗೆ ಮೋಕ್ಷರೂಪವಾದ ಜ್ಞಾನವು ಖಂಡಿತಾ ಉಂಟಾಗುವುದಿಲ್ಲ. ಯೋಗಿಯಾದರೂ ನಾನೇ ಬ್ರಹ್ಮನಾಗಬೇಕೆಂಬ ದೃಢವಾದ ಜ್ಞಾನವಿಲ್ಲದವನಿಗೆ ಮೋಕ್ಷಮಾರ್ಗದ ಕರ್ಮಕ್ಕೆ ಅಧಿಕಾರಿಯಾಗುವುದಿಲ್ಲ. ಆದುದ ರಿಂದ ಮೋಕ್ಷಾಭಿಲಾಷಿಯು ಜ್ಞಾನವನ್ನು ಯೋಗವನ್ನು ದೃಢವಾಗಿ ಅಭ್ಯಾಸ ಮಾಡಬೇಕು.

ಮೇಲಿನ ತಾತ್ಪರ್ಯಕ್ಕೆ ತ್ರಿಶಿಖೀ ಬ್ರಾಹಣೋಪನಿಷತ್ತಿನಲ್ಲಿ

**ಯೋಗಾತ್ಸಂ ಜಾಯತೆ ಜ್ಞಾನಂ ಜ್ಞಾನಾದ್ಯೋಗಃ ಪ್ರವರ್ತತೆ।**
**ಯೋಗ ಜ್ಞಾನ ಪರೋನಿತ್ಯಂ ಸಯೋಗಿ ನಪ್ರಣಶ್ಯತಿ॥**

ತಾತ್ಪರ್ಯ॥ ಯೋಗಾನುಷ್ಠಾನದ ಪರಿಪಕ್ವಾವಸ್ಥೆಯಲ್ಲಿ ಪರಮಾತ್ಮನಾಗುವ ಜ್ಞಾನವು ಉದಯಿಸುವುದು. ಗುರೂಪದೇಶದಿಂದ ನಾನೇ ಬ್ರಹ್ಮನಾಗಿರುವನೆಂಬ ತಿಳುವಳಿಕೆಯು ಯೋಗದಲ್ಲಿ ಪ್ರವರ್ತಿಸುವಂತೆ ಮಾಡುವುದು. ಎಂದು ಹೇಳಿದೆ. ಮೇಲಿನ ಎರಡು ಉಪನಿಷತ್ತಿನ ವಾಕ್ಯಗಳು ಋಗ್ವೇದ ಯಜುರ್ವೇದ ತತ್ವಗಳಿಗೆ ಬಹು ಮುದ್ದಾಗಿ ಅನ್ವಯವಾಗುವುವು.

ಭಗವದ್ಗೀತಾ 4ನೇ ಅಧ್ಯಾಯದ 28ನೇ ಶ್ಲೋಕದಲ್ಲಿ ತಪೋಯಜ್ಞ ವೆಂಬುದಾಗಿ ಹೇಳಿದೆ. ಇದರ ವಿಚಾರವನ್ನು ಇಲ್ಲಿನ ಸಂದರ್ಭಕ್ಕೆ ತಿಳಿದುಕೊಳ್ಳ ಬೇಕಾಗಿದೆ. ತಪಸ್ಸೆನ್ನುವುದು ಕರ್ಮಜ್ಞಾನ ಗಳೆರಡಕ್ಕೂ ಇದೆ. ಇಲ್ಲಿನ ಸಂದರ್ಭಕ್ಕೆ ಜ್ಞಾನಸಮಾರ್ಗದ ತಪಸ್ಸಿನದು ಅನ್ವಯವಾಗುವುದು. ತೈತ್ತಿರೀಯೋಪನಿಷತ್ತಿನ ಭೃಗುವಲ್ಲಿಯಲ್ಲಿ ಭೃಗುವು ತಪಸ್ಸಿನಿಂದ ಬ್ರಹ್ಮವನ್ನು ಅರಿತನು ಎಂದಿದೆ. ಈ ಸಂದರ್ಭದಲ್ಲಿ ಶ್ರೀ ಶಂಕರಾಚಾರ್ಯರವರು ತಪಃ ಶಬ್ದಕ್ಕೆ ಅರ್ಥ ಬರೆದಿರುವು ದೇನೆಂದರೆ

**ಬ್ರಹ್ಮವಿಜ್ಞಾನ ಸಾಧನತ್ವೇನ ತಪಃ ಪ್ರತಿಪೇದೇ ಭೃಗುಃ ।**
**ತಚ್ಚ ತಪಃ ಬಾಹ್ಯಾನ್ತಃ ಕರಣ ಸಮಾಧಾನಂ ।**
**ತದ್ವಾರ ಕತ್ವಾತ್ ಬ್ರಹ್ಮಪರಿಪತ್ತೇಃ । ಮನಸಶ್ಚೇಂದ್ರಿಯಾಣಾಂ**
**ಚ ಹ್ಯೈಕಾಗ್ರಂ ಪರಮಂ ತಪಃ ।**

ಅಂದರೆ ಪರಬ್ರಹ್ಮ ಸಾಕ್ಷಾತ್ಕಾರಕ್ಕೆ ತಪಸ್ಸು ಸಾಧನವೆಂದು ಭೃಗುವು ತಿಳಿದು ಕೊಂಡನು. ತಪಸ್ಸೆಂದರೆ ಹೊರಗಿನ ಮತ್ತು ಒಳಗಿನ ಕರಣಗಳ ಸಮಾಧಾನರೂಪ ವಾದದ್ದೇ ಆಗಿದೆ. ಮನಸ್ಸು ಮತ್ತು ಇಂದ್ರಿಯಗಳ ಏಕಾಗ್ರವೆ ಹೆಚ್ಚಿನ ತಪಸ್ಸು ಎಂದು ಬರೆದಿರುವರು. ಓಂಕಾರೋಚ್ಚಾರಣೆಯಿಂದ ಧ್ಯಾನಾನುಷ್ಠಾನ ಮಾಡುವುದ ರಲ್ಲಿ ಬಿಂದು ನಾದಗಳನ್ನು ಬುದ್ಧಿಯಿಂದ ಧರಿಸಿಕೊಂಡು ಧ್ಯಾನ ಮಾಡಬೇಕಾಗು ವುದು. ಸಗುಣವಾದ ಬಿಂದು ನಾದಗಳನ್ನು ಧರಿಸಿ ತನ್ಮಯವಾಗಿ ನಿರತವಾಗಿರುವಿಕೆಯೆ ತಪಸ್ಸು. ನಿರತವಾಗಬೇಕಾದರೆ ದೇಹ ಮತ್ತು ಹೊರಗಿನ ವಿಷಯಗಳಲ್ಲಿ ವಿರಕ್ತಿಯು ಬಹು ಚೆನ್ನಾಗಿರಬೇಕು. ಬಿಂದು ನಾದಗಳನ್ನು ಧರಿಸಿ ತನ್ಮಯವಾದ ತಪಸ್ಸನ್ನು ಆಚರಿಸುತ್ತಾ ಬರುವುದರಿಂದ ಅವಿದ್ಯಾ ಸಕ್ತಿಗಳು ನಿಗ್ರಹವಾಗುವುವಲ್ಲದೆ ಧ್ಯಾನವೂ ಅಭಿವೃದ್ಧಿಯಾಗುತ್ತಾ ಬರುವುದು. ಹೀಗೆ ಧ್ಯಾನವು ಅಭಿವೃದ್ಧಿಯಾಗುತ್ತಾ ಬಂದರೆ ಮೇಲಿನ ಶ್ರೀ ಶಂಕರಾಚಾರ್ಯರವರ ವಾಕ್ಯದಂತೆ ಏಕಾಗ್ರತೆ ಬಂದು ಪರಬ್ರಹ್ಮ ಸ್ಥಿತಿಯನ್ನು ಹೊಂದಬಹುದು.

ಋಗ್ವೇದ ಯಜುರ್ವೇದಗಳಿಗಿರುವ ಅಂದರೆ ಯೋಗಾನುಷ್ಠಾನಕ್ಕೂ ಜ್ಞಾನಕ್ಕೂ ಇರುವ ಅನ್ಯೋನ್ಯ ಸಂಬಂಧವನ್ನು ಮೇಲೆ ವಿವರಿಸಿತು. ಯಜುರ್ವೇದಕ್ಕೂ ಸಾಮ ವೇದಕ್ಕೂ ಇರುವ ಸಂಬಂಧವೇನೆಂಬುದನ್ನು ವಿವರಿಸೋಣ.

ಕರ್ಮಕಾಂಡದಂತೆ ಮಾಡುವ ಯಜ್ಞಕರ್ಮದಲ್ಲಿ

ಋಗ್ವೇದೇನ ಹೋತಾಶಂಸತಿ। ಯಜುರ್ವೇದೇನ ಅಧ್ವರ್ಯುರ್ಯಜತಿ।
ಸಾಮವೇದೇ ನೋದ್ಗಾತ। ಸರ್ವೈರ್ಬ್ರಹ್ಮ।

ಅಂದರೆ ಯಜ್ಞಕರ್ಮದಲ್ಲಿ ಹೋತೃವೆನಿಸುವವನು ಯಾವ ದೇವತೆಗಳನ್ನು ಕುರಿತು ಯಜಮಾನನು ಯಜ್ಞಮಾಡುವನೋ ಆ ದೇವತೆಗಳ ಗುಣ ವರ್ಣನೆಯ ಮಂತ್ರವನ್ನು ಹೇಳುವನು. ವರ್ಣನೆಯ ಮಂತ್ರವಾದ ನಂತರ ಅಧ್ವರ್ಯುವೆನಿಸುವವನು ದೇವತೆಗಳ ಆರಾಧನಾ ರೂಪವಾದ ಮಂತ್ರಗಳನ್ನು ಹೇಳಿಕೊಂಡು ಯಜ್ಞೇಶ್ವರನಲ್ಲಿ ಹೋಮ ಮುಂತಾದ ಕ್ರಿಯೆಗಳನ್ನು ಮಾಡುವನು. ಇದಾದ ನಂತರ ಸಾಮವೇದದ ಕಾರ್ಯ ಮಾಡುವ ಉದ್ಗಾತೃವೆನಿಸುವವನು ಆರಾಧನಾ ದೇವತೆಗಳನ್ನು ಕುರಿತು ತಮಗೂ ಆರಾಧನಾ ದೇವತೆಗೂ ಏಕೀಕರಣವಾದ ಸಂಬಂಧವನ್ನುಂಟು ಮಾಡುವಂತಹ ನಮ್ರತೆಯಿಂದಲೂ ಪವಿತ್ರತೆಯಿಂದಲೂ, ಗಾಂಭೀರ್ಯದಿಂದಲೂ ಅತ್ಯಂತ ಪ್ರೀತಿ ಪೂರ್ವಕವಾದ ಭಕ್ತಿಯಿಂದಲೂ ಸ್ತೋತ್ರ ಮಾಡುವುದನ್ನು ನಿರೂಪಿಸುವುದೇ ಸಾಮವೇದದ ತತ್ವವಾಗಿರುವುದು.

ಸಾಮವೇದದ ತತ್ವದವನಿಗೆ ಉದ್ಗಾತೃ ಎಂದು ಹೆಸರು. ಇವರು ಹೇಳುವ ಮಂತ್ರಗಳಿಗೆ ಉದ್ಗೀತ ಎಂದು ಹೆಸರು.

ಉದ್ಗೀತಾ ಎಂಬ ಪದಕ್ಕೆ ಉತ್– ಮೇಲೆ ಮೇಲಕ್ಕೆ ಹತ್ತಿಕೊಂಡು ಹೋಗಿ ದೇವಲೋಕದಲ್ಲಿ ವಾಸವಾಗಿರುವ ಯಾವ ದೇವತೆಯನ್ನು ಯಜ್ಞಕರ್ಮದಲ್ಲಿ ಆರಾಧಿಸುತ್ತಿರುವರೊ ಅಂತಹ ದೇವತೆಗೆ ಸಂಬಂಧ ಪಡುವ ನಾದಶಕ್ತಿಗೆ ಉದ್ಗೀತಾ ಎಂದು ಹೆಸರು. ಇಂತಹ ಮಂತ್ರವನ್ನು ಹೇಳುವವನಿಗೆ ಉದ್ಗಾತೃ ಎಂಬ ಹೆಸರಿದೆ. ಯಜುರ್ವೇದದ ತತ್ವವಾದ ಧ್ಯಾನಯೋಗಾನುಷ್ಠಾನ ಮಾಡುವ ಕಾರ್ಯದಲ್ಲಿ ಸಾಮವೇದದ ತತ್ವವು ಯಾವ ಯಾವ ವಿಧವಾಗಿ ಸಹಾಯಕವಾಗಿರುತ್ತೆಂಬ ವಿಚಾರವನ್ನು ವಿವರಿಸೋಣ. ಧ್ಯಾನಮಾಡುತ್ತಿರುವ ಅಧಿಕಾರಿಯಲ್ಲಿ ನಾನೇ ಬ್ರಹ್ಮ ನೆಂಬುವುದರಲ್ಲಿ ಪ್ರೀತಿ ಎಂದರೆ ಭಕ್ತಿಯು ಬಹು ಚೆನ್ನಾಗಿರಬೇಕು. ಶ್ರೀ ಶಂಕರಾಚಾರ್ಯರವರು "ಸ್ವಸ್ವರೂಪಾನುಸಂಧಾನಂ ಭಕ್ತಿರಿತ್ಯಭಿಧೀಯತೆ" ಅಂದರೆ ಸ್ವಸ್ವರೂಪವನ್ನು ಅನುಸಂಧಾನ ಮಾಡುವಿಕೆಯೆ ಭಕ್ತಿಯೆಂದು ಹೇಳಿರುತ್ತಾರೆ. ಅಲ್ಲದೆ ಶ್ರೀ ನಾರದ ಮಹರ್ಷಿಗಳು ಭಕ್ತಿ ಸೂತ್ರದಲ್ಲಿ "ಸಾತ್ವಸ್ಮಿನ್ ಪರಮ ಪ್ರೇಮ ರೂಪಾ ಅಮೃತ ರೂಪಾಚ" ಅಂದರೆ ಪರಮಾತ್ಮನಲ್ಲಿರುವ ಪರಮ ಪ್ರೇಮವು ಅಮೃತರೂಪದ್ದಾಗ ಬೇಕೆಂದರೆ ಸಾಕ್ಷಾತ್ ಪರಮಾತ್ಮನೇ ತಾನಾಗ ಬೇಕೆಂಬ ರೀತಿಯದೆ ಭಕ್ತಿಯು ಎಂದು

ಹೇಳಿರುತ್ತಾರೆ. ಅಂದರೆ ಇಂತಹ ಭಕ್ತಿಯು ಸಾಮವೇದಕ್ಕೆ ಸೇರಿದುದು. ಸಾಮ ಶಬ್ದದ ಅರ್ಥವು ಸಾಂತ್ವೇ ಸಾಂತ್ವಃ ಅಂದರೆ ಪ್ರಿಯವನ್ನುಂಟುಮಾಡಿ ಅಭಿವೃದ್ಧಿ ಪಡಿಸುವುದು. ಪ್ರಿಯವೆನ್ನುವುದು ಆನಂದಾಂಶಕ್ಕೆ ಸೇರಿದುದು. ಈ ತಾತ್ಪರ್ಯಕ್ಕೆ ತೈತ್ತಿರೀಯೋಪನಿಷತ್ ಆನಂದವಲ್ಲಿಯಲ್ಲಿ

**ತಸ್ಯಪ್ರಿಯಮೇವಶಿರಃ । ಮೋದೋ ದಕ್ಷಿಣಃ ಪಕ್ಷಃ।**
**ಪ್ರಮೋದ ಉತ್ತರಃ ಪಕ್ಷಃ । ಆನನ್ದ ಆತ್ಮಾ ।**

ಅಂದರೆ ಆನಂದಕ್ಕೆ ಪ್ರಿಯವೇ ಮುಖ್ಯವಾಗಿದೆಯೆಂದರೆ ಅಸ್ತಿಭಾರವಾಗಿರುತ್ತದೆ. ಪ್ರಿಯವಾದದ್ದು ದೊರೆತರೆ ಮೋದವೆಂದರೆ ಸಂತೋಷವಾಗುತ್ತೆ. ಪ್ರಿಯವಾದದ್ದನ್ನು ತಾನು ಅನುಭವಿಸಿದಾಗ ಪ್ರಮೋದ ಅಂದರೆ ಅತ್ಯಂತ ಸಂತೋಷವಾಗುವುದು. ಇದು ಪ್ರಪಂಚ ವ್ಯವಹಾರಕ್ಕೆ ಸೇರಿದುದು. ಮೋಕ್ಷವನ್ನು ಪಡೆಯುವುದರಲ್ಲೂ ಪ್ರಿಯತ್ವವನ್ನು ಹೊಂದಿ ಜ್ಞಾನದಿಂದಲೂ ಶ್ರದ್ಧೆಯಿಂದಲೂ ಯೋಗಾನುಷ್ಠಾನದ ತಪಸ್ಸಿನಿಂದಲೂ ಪ್ರಿಯತ್ವವು ಅಧಿಕವಾಗಿ ಮೋದವೂ, ಮೋದದಿಂದ ಪ್ರಮೋದವೂ, ಪ್ರಮೋದದಿಂದ ಆನಂದ ಸ್ವರೂಪವಾದ ಪರಬ್ರಹ್ಮತ್ವವು ಪ್ರಾಪ್ತವಾಗುವುದು. ಆನನ್ದ ಆತ್ಮಾ ಎಂಬುದಾಗಿ ತೈತ್ತಿರೀಯೋಪನಿಷತ್ತಿನಲ್ಲಿ ಹೇಳಿರುವಿಕೆಯೂ ಇದೇ ಆಗಿರುತ್ತೆ. ಆದುದರಿಂದ ಸಾಮವೇದವು ಧ್ಯಾನಾನುಷ್ಠಾನದಲ್ಲಿ ಆನಂದಾಂಶವನ್ನು ಅಧಿಕ ಮಾಡಿ ಆನಂದರೂಪವಾದ ಪರಬ್ರಹ್ಮನನ್ನು ಹೊಂದಿಸುವುದು.

ಸಾಮವೇದದ ಗಾನವು ಉದ್ಗೀತಾರೂಪವೆಂದರೆ ಗಾನವು ಮೇಲೆಮೇಲಕ್ಕೆ ಹತ್ತಿಸಿಕೊಂಡು ಹೋಗುವ ಶಕ್ತಿಯುಳ್ಳದ್ದೆಂದು ಹಿಂದೆ ತಿಳಿಸಿತಷ್ಟೆ. ಓಂಕಾರ ವರ್ಣೋಚ್ಚಾರಣೆಯಿಂದ ಮಾಡುವ ಧ್ಯಾನದಲ್ಲಿ ಓಂಕಾರೋಚ್ಚಾರಣೆಯು ಮಂದ್ರ ಮಧ್ಯಮ, ತಾರ ಎಂಬ ಮೂರು ಸ್ಥಾಯಿಗಳುಳ್ಳದ್ದು. ಪ್ರಥಮದ ಮಂದ್ರವ ಸ್ಥಾಯಿಯಲ್ಲಿ ನಾದವು ಬಹು ಗಡುಸಾಗಿಯೂ ಅರಿಯಲು ಕಷ್ಟವಾಗಿಯೂ ಇರುವುದು. ಇದೇ ಬಿಂದುನಾದ ಕಳೆಗಳಲ್ಲಿ ಬಿಂದುವನ್ನು ಧಾರಣೆ ಮಾಡಿಕೊಂಡು ಧ್ಯಾನಾಭ್ಯಾಸ ಮಾಡುವ ಪ್ರಥಮ ಸ್ಥಿತಿಯಾಗಿರುವುದು. ಧ್ಯಾನಾಭಿವೃದ್ಧಿಯಾಗಿ ಮಂದ್ರದಿಂದ ಮಧ್ಯಮಕ್ಕೆ ಹತ್ತಿದಾಗ ಆನಂದದಾಯಕವಾಗಿರುವ ಈಶ್ವರನ ವಾಣಿಯೆನಿಸುವ ಓಂಕಾರ ನಾದದ ಸ್ಥಿತಿಯು ಪ್ರಾಪ್ತವಾಗುವುದು. ಇನ್ನೂ ಧ್ಯಾನಾಭಿವೃದ್ಧಿಯಾದಲ್ಲಿ ಮಧ್ಯಮದಿಂದ ತಾರಸ್ಥಾಯಿಯು ಪ್ರಾಪ್ತವಾಗುವುದು. ತಾರ ಎಂಬ ಪದಕ್ಕೆ 'ತಾರಯ ತೀತಿ ತಮಃ' ತಾರಕ (ತೃಪ್ಲನನ ತರಣಯೋಃ) ಅವಿದ್ಯೆ

ಯನ್ನು ನಿಗ್ರಹಿಸಿ ದಾಟಿಸುವುದು. ತಾರಕಪದಕ್ಕೆ ಅದ್ವಯ ತಾರಕೋಪನಿಷತ್ತು, ಅಥರ್ವಶಿಖೋಪನಿಷತ್ತು ಮತ್ತು ರಾಮರಹಸ್ಯೋಪನಿಷತ್ತಿನಲ್ಲಿ ಹೇಳಿರುವು ದೇನೆಂದರೆ

**ಗರ್ಭ ಜನ್ಮ ಜರಾ ಮರಣ ಸಂಸಾರ ಮಹದ್ಭಯಾ**
**ತ್ಸಂತಾರಯತಿ ತಸ್ಮಾತ್ತಾರಕಮಿತಿ ।**

ಅಂದರೆ ಗರ್ಭವಾಸ, ಹುಟ್ಟುವಿಕೆ, ಮುಪ್ಪು, ಸಾವು, ಪ್ರಪಂಚ ವ್ಯಾಪಾರದ ಬಂಧನ ಮುಂತಾದವುಗಳ ಮಹಾಭಯದಿಂದ ಬಿಡಿಸುವುದು ಯಾವುದೋ ಅದೇ ತಾರಕ- ಆದುದರಿಂದ ಓಂಕಾರನಾದೋಪಾಸನೆಯ ಸೋಪಾನದಿಂದ ಧ್ಯಾನದಲ್ಲಿ ಮುಂದುವರಿದರೆ ಅವಿದ್ಯೆಯು ನಾಶವಾಗುವ ಆನಂದ ಮಗ್ನತೆಯು ಉಂಟಾಗುವ ಬಿಂದು ನಾದಗಳನ್ನು ದಾಟಿದ ಕಳಾಸ್ಥಿತಿಯು ಪ್ರಾಪ್ತವಾಗುವುದು. ಕಳಾಸ್ಥಿತಿಯೆ ಈಶ್ವರ ಸೋಪಾನದ ಸ್ಥಿತಿ. ಕಳಾಸೋಪಾನವನ್ನು ದಾಟಿದರೆ "ನಿಶ್ಶಬ್ದಂ ಬ್ರಹ್ಮ ಉಚ್ಯತೆ" ಎಂಬ ಉಪನಿಷತ್ಪ್ರಮಾಣದಂತೆ ಪರಮಾತ್ಮ ಸ್ಥಿತಿಯು ಲಭ್ಯವಾಗುವುದು ಮೇಲಿನ ತತ್ವ ವಿಚಾರಗಳೆಲ್ಲಾ ಕ್ರಿಯಾ ಶಕ್ತಿಯಾದ ಯಜುರ್ವೇದವು ಸಾಮವೇದದ ಶಕ್ತಿಯ ಸಹಾಯದಿಂದ ನಡೆಸುವ ಕಾರ್ಯಗಳಾಗಿವೆ.

ಅಲ್ಲದೆ ಮೇಲೆ ತಿಳಿಸಿರುವ ಮಂದ್ರ ಮಧ್ಯಮ ತಾರಸ್ಥಾಯಿಗಳ ವಿಚಾರಗಳು ಪರಾಶಕ್ತಿಯ ಕ್ರಿಯಾಶಕ್ತಿಯಾದ ಶ್ರೀ ಕುಂಡಲಿನೀ ಶಕ್ತಿಯ ತತ್ವಕ್ಕೂ ಅನ್ವಯ ವಾಗುವುದು. ಹೇಗೆಂದರೆ ಯಜರಾರಣ್ಯಕದಲ್ಲಿ

**ಯತ್ಕುಮಾರೀ ಮನ್ದ್ರಯತೇ ಯದ್ಯೋಷಿದ್ಯತ್ಪತಿವ್ರತಾ ।**
**ಅರಿಷ್ಟಂ ಯತ್ಕಿಂಚ ಕ್ರಿಯತೆ ಅಗ್ನಿಸ್ತದನುವೇಧತಿ ।**

ತಾತ್ಪರ್ಯ॥ ಶ್ರೀ ಕುಂಡಲಿನೀ ಶಕ್ತಿಗೆ ಮೂರು ಅವಸ್ಥೆಗಳಿರುವುವು. ಒಂದನೆಯದು ಕುಮಾರಿ, ಎರಡನೆಯದು ಯೋಷಿದ ಸ್ಥಿತಿ, ಮೂರನೆಯದು ಪತಿವ್ರತಾ ಸ್ಥಿತಿ. ಮೊದಲನೆಯದಾದ ಕುಮಾರಿ ಎನಿಸಿದಾಗ ಮನ್ದ್ರದ ಸ್ಥಿತಿ, ಅಂದರೆ ಪ್ರಥಮದಲ್ಲಿ ಓಂಕಾರ ನಾದವು ಮಂದ್ರದ ಸ್ಥಿತಿಯಲ್ಲಿ ಇರುತ್ತದೆ. ಇದನ್ನು ಅನುಸರಿಸಿ ಕುಂಡಲಿನೀ ಶಕ್ತಿಗೆ ಮಂದ್ರದ ಸ್ಥಿತಿಯೆಂದರೆ ಕುಮಾರಿಯ ಸ್ಥಿತಿ.

ಅನಂತರ ಕುಂಡಲಿನಿಗೆ ಯೋಷಿದವಸ್ಥೆಯೆಂದರೆ ವಿವಾಹ ವಾಗತಕ್ಕ ಕನ್ಯಾವಸ್ಥೆಯು ಬರುವುದು. ಈ ಸ್ಥಿತಿಯನ್ನು ಅನುಸರಿಸಿಯೆ ಓಂಕಾರನಾದವು ಮಂದ್ರದ ಸ್ಥಿತಿ ಯಿಂದ ನಾದದ ಸ್ಥಿತಿಗೆ ಹತ್ತಿ ಮಧ್ಯಮದ ತತ್ವಕ್ಕೆ ಬರುವುದು. ಮಧ್ಯಮಾ ಎಂದರೆ "ಮಧ್ಯೆ ವಯಸಿ ತಿಷ್ಠತಿ ಮಧ್ಯಮಾ" ಎಂದರೆ ಋತುಮತಿಯಾದ ಕನ್ಯೆಗೆ ಮಧ್ಯಮ ವಯಸ್ಸಿನವಳೆಂದು ಹೆಸರು. ಇದೇ ಯೋಷಿದವಸ್ಥೆ

ಓಂಕಾರ ನಾದದಿಂದ ಮೇಲಕ್ಕೆ ಹತ್ತಿದಾಗ ಧ್ಯಾನಾನುಷ್ಠಾನದಲ್ಲಿ ತಾರಸ್ಥಿತಿ ಪ್ರಾಪ್ತವಾಗುವುದು. ತಾರಸ್ಥಾಯಿಯೆ ಅವಿದ್ಯೆಯೆಲ್ಲಾ ನಿಗ್ರಹವಾದ ಕಳಾಸ್ಥಿತಿ ಈ ಕಳಾಸ್ಥಿತಿಯೆ ಈಶ್ವರ ಸ್ಥಿತಿ. ಕುಂಡಲಿನೀ ಶಕ್ತಿಯು ಪತಿವ್ರತಾ ಎನಿಸಿ ಕೊಳ್ಳುವುದೆಂದರೆ ಈಶ್ವರನಿಗೆ ಪತ್ನಿಯಾಗುವಳು. ಮುಖ್ಯ ತಾತ್ಪರ್ಯ ವೇನೆಂದರೆ ಯಜುರ್ವೇದ ಮತ್ತು ಸಾಮವೇದ ಶಕ್ತಿಗಳೂ ಒಂದಕ್ಕೊಂದು ಸಹಾಯಕವಾಗಿ ಓಂಕಾರೋಪಾಸನೆಯಲ್ಲಿನ ಮಂದ್ರ ಸ್ಥಾಯಿಯಿಂದ ಮಧ್ಯಮಕ್ಕೂ, ಮಧ್ಯಮದಿಂದ ತಾರಸ್ಥಾಯಿಗೂ ಹತ್ತುವುದನ್ನು ಅನುಸರಿಸಿ ಕುಂಡಲಿನೀ ಶಕ್ತಿಯೂ ಸಹ ಅವಿದ್ಯಾಶಕ್ತಿಗಳನ್ನು ನಿಗ್ರಹಿಸಿಕೊಂಡು ತನ್ನಲ್ಲಿ ಅಡಗಿಸಿಕೊಳ್ಳುತ್ತಾ ಕಳಾಸ್ಥಿತಿಯಾದ ಈಶ್ವರ ಸೋಪಾನಕ್ಕೆ ಬಂದಾಗ ತನ್ನ ವಲ್ಲಭನಾದ ಈಶ್ವರನೊಡಗೂಡುವಳು.

ಯಜುರ್ವೇದದ 36 ನೇ ಅಧ್ಯಾಯದಲ್ಲಿ "ಸಾಮಂ ಪ್ರಾಣಂ ಪ್ರಪದ್ಯೇ" ಎಂದರೆ ಪ್ರಾಣವನ್ನು ತೆಗೆದುಕೊಂಡು ಸಾಮವೇದವನ್ನು ಶರಣು ಹೊಂದುತ್ತೇನೆ ಎಂದಿದೆ. ಅಂದರೆ ಮೋಕ್ಷಕಾಲದಲ್ಲಿ ಸಾಮವೇದ ಶಕ್ತಿಯು ದೇಹದಲ್ಲಿರುವ ಪಂಚಪ್ರಾಣ ಸೂರ್ಯಶಕ್ತಿ ಇಂದ್ರಿಯ ಶಕ್ತಿಗಳೆಲ್ಲವನ್ನೂ ಉದ್ಗೀತಾರೂಪವಾಗೆಂದರೆ ಮೇಲಕ್ಕೆಳೆದುಕೊಂಡು ಓಂಕಾರೋಚ್ಚಾರಣೆಯಲ್ಲಿ ಅಡಗಿಸಿ ಪರಮಾತ್ಮನಲ್ಲಿ ಸೇರಿಸುವುದು. ಈ ತತ್ವವನ್ನು ಅಥರ್ವಶಿಖೋಪನಿಷತ್ತಿನ "ಪ್ರಾಣಾಂತ್ಸರ್ವಾನ್ಪರಮಾತ್ಮನಿ ಪ್ರಣಾಮಯತಿ ತ್ಯೇತಸ್ಮಾತ್ ಪ್ರಣವಃ" ಎಂದರೆ ಸಕಲ ಪ್ರಾಣಗಳನ್ನೂ ಪ್ರಣಾಮ ರೂಪವಾಗಿ ಪರಮಾತ್ಮನಲ್ಲಿ ಅರ್ಪಿಸುವುದರಿಂದ ಪರಮಾತ್ಮನಿಗೆ ಓಂಕಾರ ಅಥವಾ ಪ್ರಣವವೆಂದು ಹೆಸರು ಬಂದಿದೆ.

ಇದುವರೆಗೆ ಅನುಷ್ಠಾನ ಕ್ರಮದಲ್ಲಿ ಓಂಕಾರದಲ್ಲಿನ ಬಿಂದು ನಾದಗಳ ಸೋಪಾನಗಳನ್ನು ದಾಟಿ ಕಳಾ ಸೋಪಾನಕ್ಕೆ ಹತ್ತುವ ಸ್ಥಿತಿಯವರೆಗಿನ ವಿಚಾರಗಳು ಬಂದಿವೆ. ಇನ್ನು ಮುಂದೆ ಈಶ್ವರ ಈಶ್ವರಿಯರ ಸ್ಥಾನವಾಗಿರುವ ಕಳಾಸೋಪಾನದ ವಿಚಾರ, ವೇದಗಳಲ್ಲೂ ಜ್ಯೇಷ್ಠವಾದ ಋಗ್ವೇದ ಒಂದೇ ಉಳಿದುಕೊಳ್ಳುವ ಮತ್ತು ಋಗ್ವೇದದ ಮಹಾವಾಕ್ಯವಾದ ಪ್ರಜ್ಞಾನಂ ಬ್ರಹ್ಮ ಎಂಬುದರ ಮಹಿಮಾ ವಿಚಾರಗಳು

ಬರುವುವು.

ಋಗ್ವೇದವು ಜ್ಞಾನಶಕ್ತಿಯ ರೂಪದದು. ಎಂತಹ ಜ್ಞಾನಶಕ್ತಿಯ ರೂಪದು ದೇದರೆ ಪ್ರಜ್ಞಾನ ರೂಪದದು. ಪ್ರಜ್ಞಾನವೆಂದರೆ ಸರ್ವೋತ್ಕೃಷ್ಟವಾದ ಮಹಾ ಮಹಿಮ.ಯುಳ್ಳದ್ದಾಗಿ ಅಖಂಡಾಕಾರವಾಗಿ ವಿಶ್ವದಲ್ಲೆಲ್ಲಾ ವ್ಯಾಪಿಸಿರುವ 'ಅಹಂ' ಎಂಬ ಜ್ಞಾನರೂಪದುದಾಗಿರುವುದರಿಂದ ಸರ್ವಜ್ಞವೆನಿಸಿರುವ ಜ್ಞಾನ ಶಕ್ತಿ ಯೆ ಪ್ರಜ್ಞಾನವಾಗಿರುತ್ತದೆ. ಇದಕ್ಕೆ ಶುದ್ಧ ಸತ್ವ ಗುಣ, ಶುದ್ಧ ಸತ್ವ ಪ್ರಧಾನ ಮಾಯ, ವಿದ್ಯಾ. ಶುದ್ಧ ಸತ್ವ ಪ್ರಕೃತಿ ಎಂಬ ಹೆಸರುಗಳಿರುವುವು. ಈ ಪ್ರಜ್ಞಾನರೂಪವಾದ ಈ ಅಹಂ ಜ್ಞಾನಶಕ್ತಿಯು ಅಂ, ಅಃ ಎಂಬ ಎರಡು ಅಕ್ಷರಗಳ ತತ್ವಗಳನ್ನೂ ಒಳ ಗೊಂಡಿದೆ. ಭಗವದ್ಗೀತಾ 7ನೇ ಅಧ್ಯಾಯ, 4, 5ನೇ ಶ್ಲೋಕಗಳಲ್ಲಿ ತಿಳಿಸುವ ಭೂಮಿ, ನೀರು ಮುಂತಾದ ಎಂಟು ವಿಧದಲ್ಲಿರುವ ಅಪರಾ ಪ್ರಕೃತಿಗಿಂತಲೂ ಶ್ರೇಷ್ಠವಾಗಿ ಜೀವಭೂತವೆಂದರೆ ಜಗತ್ತಿನ ಇರುವಿಕೆಗೆ ಕಾರಣವಾಗಿ ಜಗತ್ತನ್ನೇ ಧರಿಸಿ ರುವ ಪರಾಪ್ರಕೃತಿಯೆ ಪ್ರಜ್ಞಾನ ರೂಪವಾದ ಜ್ಞಾನಶಕ್ತಿಯು- ಈ ಜ್ಞಾನಶಕ್ತಿಯಲ್ಲಿ ಪರಬ್ರಹ್ಮನು ಪ್ರತಿಫಲಿಸಿ ಪ್ರತಿಫಲಿತ ಚೈತನ್ಯನೆನಿಸಿಕೊಳ್ಳುವನು. ಈ ಪ್ರತಿಫಲಿತ ಚೈತನ್ಯನೇ ಈಶ್ವರನೆನಿಸಿಯೂ, ಪ್ರಜ್ಞಾನ ರೂಪವಾದ ಅಹಂ ಜ್ಞಾನ ಶಕ್ತಿ ಯೆ ಈಶ್ವರೀ ಎನಿಸಿಯೂ ಜಗತ್ತನ್ನು ಸೃಷ್ಟಿಸಿ ಪಾಲಿಸಿ ಲಯಮಾಡುವುದಕ್ಕೆ ಪ್ರಭುಗಳಾ ಗಿರುವರು. ಪರಬ್ರಹ್ಮವೆ ಪ್ರಜ್ಞಾನರೂಪವಾದ ಅಹಂ ಜ್ಞಾನರೂಪ ವಾಗಿರುವುದ ರಿಂದಲೂ ಪರಬ್ರಹ್ಮವೆ ಪ್ರತಿಫಲಿತ ಚೈತನ್ಯವಾಗಿರುವುದರಿಂದಲೂ ಈಶ್ವರ ಈಶ್ವರಿ ಯರು ಸರಿ ಸಮಾನ ಮಹಿಮೆಯುಳ್ಳವರಾಗಿರುವರು. ಇದರಲ್ಲಿ ಕೊಂಚವೂ ಸಂಶಯವಿಲ್ಲ. ಪ್ರತಿ ದೇಹದಲ್ಲೂ ಅರ್ಧ ಭಾಗ ಈಶ್ವರೀ ತತ್ವವಾಗಿಯೂ, ಇನ್ನರ್ಧ ಭಾಗ ಈಶ್ವರನ ತತ್ವವಾಗಿ ಇರುವುದರಿಂದಲೂ ಶ್ರೀಮನ್ನಾರಾಯಣನ ಪ್ರಾಣಶಕ್ತಿ ಯಾಗಿ ಅವನ ವಕ್ಷಸ್ಥಳದಲ್ಲಿ ಇರುವವಳೇ ಪ್ರಜ್ಞಾನರೂಪವಾದ ಅಹಂ ಶಕ್ತಿಯಾಗಿ ರುವುದರಿಂದಲೂ ಭೇದ ಭಾವದ ಪಾಷಂಡಿತನಕ್ಕೆ ಅವಕಾಶವೇ ಇಲ್ಲ.

ಮೇಲೆ ತಿಳಿಸಿರುವಂತಹ ಬ್ರಹ್ಮಾಂಡದಲ್ಲಿರುವ ಅಹಂ ಜ್ಞಾನರೂಪವಾದ ಪ್ರಜ್ಞಾನವೆನಿಸುವ ಜ್ಞಾನಶಕ್ತಿಯು ಪಿಂಡಾಂಡವಾದ ಮನುಷ್ಯ ದೇಹದಲ್ಲೂ ಇರುವುದು. ಆದರೆ ಅವಿದ್ಯಾಶಕ್ತಿಗಳು ಇದನ್ನು ಮುಚ್ಚಿ ದೇಹ ಸಂಬಂಧವಾದ ನಾನು ನೀನು ಎಂಬ ಜ್ಞಾನವನ್ನು ಕಲ್ಪಿಸಿಕೊಂಡು ದೇಹ ವ್ಯಾಪಾರವನ್ನು ಮಾಡಿಸು ತ್ತಿರುವುವು. ಅವಿದ್ಯಾ ಬಂಧನವು ಪರಿಹಾರವಾದರೆ ಪ್ರಜ್ಞಾನವೆನಿಸುವ ಜ್ಞಾನಶಕ್ತಿಯು ಸೋಪಾನವು ಉದಯವಾಗುವುದು. ಅಧಿಕಾರಿಯಲ್ಲಿ ಓಂಕಾರೋಪಾಸನೆಯ ಧ್ಯಾನಾನುಷ್ಠಾನ ಕ್ರಮದ ಸ್ಥಿತಿಯು ಅಂತ್ಯಕ್ಕೆ ಬಂದಿರುವುದರಿಂದ ದೇಹದಲ್ಲಿರುವ

ಪ್ರಧಾನವಾದ ಯಾವ ಯಾವ ಶಕ್ತಿಗಳು ಯಾವ ಯಾವ ರೀತಿಯಲ್ಲಿ ಪ್ರಜ್ಞಾನದ ಸೋಪಾನವನ್ನು ಹೊಂದುವುವು ಎಂಬುದನ್ನು ವಿವರಿಸೋಣ.

ನಾನು ಎಂಬ ಜ್ಞಾನವು ನೀನು ಅಥವಾ ಇದು ಎಂಬ ಎರಡನೆಯ ಜ್ಞಾನದೊಡನೆ ಕೂಡಿ ದೇಹ ವ್ಯಾಪಾರವನ್ನು ನಡೆಸುವುದು. ಅಂತರ್ಮುಖದ ದಾರಿಯಾದ ಧ್ಯಾನಾಭ್ಯಾಸ ಕಾಲದಲ್ಲಿ ನಾನು ಎಂಬ ಜ್ಞಾನವು ತನ್ನೊಳಗೆ ಕಾಣುವ ಸೂರ್ಯತೇಜೋರೂಪವನ್ನು ಎಂದರೆ ಬಿಂದುವನ್ನು ನಂತರ ನಾದವನ್ನು ಧರಿಸಿಕ್ಕೊಂಡು ಧ್ಯಾನ ಮಾಡುತ್ತಿತ್ತು. ಧ್ಯಾನಾಭಿವೃದ್ಧಿಯಾಗುತ್ತಾ ಸೂರ್ಯ ತೇಜಸ್ಸು ಇಲ್ಲದಂತಾಗುವುದು ಮತ್ತು ನಾದವೂ ನಿಶ್ಶಬ್ದದ ಸ್ಥಿತಿಗೆ ಬರುವುದು. ಈ ಕಾಲದಲ್ಲಿ ನಾನು ಎಂಬ ಜ್ಞಾನಕ್ಕೆ ಆಧಾರವೇ ಇಲ್ಲದಂತಾಗುವುದು. ನಾನೇ ಬ್ರಹ್ಮನಾಗಬೇಕೆಂಬ(ಅಹಂ ಬ್ರಹ್ಮಾಸ್ಮಿ) ಅಭಿಲಾಷೆಯಿದ್ದರೂ ಪರಬ್ರಹ್ಮವು ತನ್ನ ಧಾರಣೆಗೆ ಸಿಕ್ಕುವುದಿಲ್ಲ. ಆದ್ದರಿಂದ ಪರಬ್ರಹ್ಮವನ್ನು ಹೇಗೆ ಸೇರಬೇಕೆಂಬುದಕ್ಕೆ ಉತ್ತರ ಗೀತೆಯಲ್ಲಿರುವ ಅರ್ಜುನನ ಪ್ರಶ್ನೆ ಮತ್ತು ಶ್ರೀ ಕೃಷ್ಣಪರಮಾತ್ಮನ ಉತ್ತರವನ್ನು ಕೆಳಗೆ ಬರೆದಿದೆ.

**ಸಾಲಂಬ ಸಾಸ್ಯ ನಿತ್ಯತ್ವಂ ನಿರಾಲಂಬಸ್ಯ ಶೂನ್ಯತಾ ।**
**ಉಭಯೋರಪಿ ದೋಷತ್ವಾತ್ಕಥಂ ಧ್ಯಾಯಂತಿ ಯೋಗಿನಃ ।**

ತಾತ್ಪರ್ಯ॥ ತನ್ನ ಧಾರಣೆಗೆ ದೊರಕುವ ಸಗುಣವಾದ ಸೂರ್ಯತೇಜಸ್ಸು ಮತ್ತು ನಾದವು ನಾಶವಾಗುವಂತಹವುಗಳು. ಪರಬ್ರಹ್ಮನು ಧ್ಯಾನದ ಹಿಡಿತಕ್ಕೆ ದೊರಕುವವನಲ್ಲ. ಹೀಗೆ ಎರಡೂ ದೋಷಯುಕ್ತವಾಗಿರುವಾಗ ಆತ್ಮಸಾಷಾತ್ಕಾರ ಮಾಡಿಕೊಳ್ಳಲು ಹೇಗೆ ಧ್ಯಾನ ಮಾಡಬೇಕೆಂದು ಅರ್ಜುನನು ಕೇಳಿದನು. ಅದಕ್ಕೆ ಶ್ರೀಕೃಷ್ಣನು

**ಹೃದಯಂ ನಿರ್ಮಲಂ ಕೃತ್ವಾ ಚಿಂತಯಿತ್ವಾಹ್ಯ ನಾಮಯಂ।**
**ಅಹಮೇವ ಇದಂ ಸರ್ವಮಿತಿ ಪಶ್ಯೇತ್ಪರಂ ಸುಖಂ ॥**

ತಾತ್ಪರ್ಯ॥ ನಿನ್ನ ಹೃದಯ ನಿರ್ಮಲ ಪೂರ್ವಕವಾಗಿ ಸರ್ವವ್ಯಾಪಿಯಾದ ಪರಮಾತ್ಮನೇ ನಾನೆಂದು ಧ್ಯಾನದಲ್ಲಿ ಮುಳುಗಿದರೆ ಆತ್ಮ ಸುಖವನ್ನು ಹೊಂದುವೆ ಎಂದು ಹೇಳಿದನು.

ಮೇಲೆ ತಿಳಿಸಿರುವಂತೆ ಧ್ಯಾನಮಾಡುತ್ತಿರುವವನು ಸರ್ವವ್ಯಾಪಿಯಾದ ಪರ

ಮಾತ್ರನೇ ನಾನೆಂದು ಸಮಾಧಿಯಲ್ಲಿ ಮುಳುಗಿದನು. ಇದರಿಂದ ಫಲಿತಾಂಶವೇನಾಯಿತೆಂದರೆ ವಿಜ್ಞಾನವಾದ ನಾನು ಎಂಬ ಜ್ಞಾನವು ಪ್ರಜ್ಞಾನ ರೂಪವಾದ ಅಖಂಡಾಕಾರವಾದ ನಾನು ಎಂಬ ಜ್ಞಾನದಲ್ಲಿ ಸೇರಿತು. ಬುದ್ಧಿ ವೃತ್ತಿಯೂ ತೈಲಧಾರೆಯಂತೆ ಪ್ರಜ್ಞಾನವನ್ನು ಸೇರಿತು. ದೇಹದ ಸಕಲ ಪ್ರಾಣ ಶಕ್ತಿಗಳೂ ಪ್ರಣಾಮ ರೂಪವಾಗಿ ಬಂದು ಪ್ರಜ್ಞಾನವನ್ನು ಸೇರಿದವು. ಕುಂಡಲಿನೀ ಶಕ್ತಿಯು ಅವಿದ್ಯಾ ಶಕ್ತಿಗಳನ್ನೆಲ್ಲಾ ಉಪಸಂಹರಿಸಿಕೊಂಡು ಬಂದು ಪ್ರಜ್ಞಾನವನ್ನು ಸೇರಿ ತಾನೂ ಈಶ್ವರ ಪತ್ನಿಯೆನಿಸಿಕೊಂಡಳು. ಕ್ರಿಯಾಶಕ್ತಿಸ್ವರೂಪವಾದ ಯಜುರ್ವೇದವು ಗುರುವಿನಿಂದ ಆತ್ಮತತ್ವವನ್ನು ಶ್ರವಣಮಾಡಿ ಮನನ ಮಾಡುವ ಸ್ವಾಧ್ಯಾಯ ಯಜ್ಞ, ಧ್ಯಾನಾನುಷ್ಠಾನದ ಪ್ರಥಮ ಸೋಪಾನದಿಂದ ಪ್ರಜ್ಞಾನದ ಸ್ಥಿತಿಯನ್ನು ಹೊಂದುವವರೆಗೆ ನಡೆಯುವ ಯೋಗಯಜ್ಞ ಮತ್ತು ಧ್ಯಾನಾನುಷ್ಠಾನದಲ್ಲಿ ನಿರತವಾಗಿರುವಿಕೆಯೆಂಬ ತಪೋಯಜ್ಞ, ಈ ಕರ್ಮಗಳೆಲ್ಲವೂ ಪೂರ್ಣವಾಗಿ ತನ್ನ ಕರ್ಮವೆಲ್ಲಾ ನೆರವೇರಿ ತನಗೆ ಮುಂದಿನ ಕಾರ್ಯವು ಇಲ್ಲದುದರಿಂದ ಯಜುರ್ವೇದ ಶಕ್ತಿಯು ಋಗ್ವೇದದೊಡನೆ ಸೇರಿಕೊಂಡಿತು. ಅಂದರೆ ಕ್ರಿಯಾಶಕ್ತಿಯು ಜ್ಞಾನಶಕ್ತಿಯೊಡನೆ ಸೇರಿಕೊಂಡಿತು. ಇಚ್ಛಾ ಶಕ್ತಿರೂಪವಾದ ಸಾಮವೇದವು ಗುರುವಿನ ಸ್ಥಾನವನ್ನು ವಹಿಸಿಕೊಂಡು ಅಜ್ಞಾನ ಕೂಪದಲ್ಲಿ ಬಿದ್ದಿದ್ದ ಶಿಷ್ಯನಿಗೆ ಉದ್ಗೀತಾ ರೂಪದಲ್ಲಿ ಬೋಧೆ ಮಾಡಿ ಬೋಧೆ ಮಾಡಿ ನೀನೇ ಬ್ರಹ್ಮನೆಂಬ ಜ್ಞಾನಮಾರ್ಗದಲ್ಲಿ ಮೇಲಕ್ಕೆ ಮೇಲಕ್ಕೆ ಹತ್ತಿಸುವಿಕೆಯ ಕಾರ್ಯವು ಮತ್ತು ಧ್ಯಾನಾನುಷ್ಠಾನದಲ್ಲಿ ಪ್ರಾಣ ಮುಂತಾದ ಸಕಲ ಶಕ್ತಿಗಳನ್ನು ಓಂಕಾರೋಚ್ಚಾರಣೆಯ ಜೊತೆಯಲ್ಲಿ ಉದ್ಗೀತಾ ರೂಪದಿಂದ ಮೇಲ ಮೇಲಕ್ಕೆ ಹತ್ತಿಸಿ ಪ್ರಜ್ಞಾನಕ್ಕೆ ಹತ್ತಿಸುವ ಸಹಾಯದ ಕಾರ್ಯವೂ ಪೂರ್ಣವಾದ್ದರಿಂದ ತಾನೂ ಪ್ರಜ್ಞಾನಕ್ಕೆ ಬಂದು ಸೇರಿಕೊಂಡಿತು. ಅಂದರೆ ಇಚ್ಛಾಶಕ್ತಿಯೂ ಪ್ರಜ್ಞಾನ ಶಕ್ತಿಯೊಡನೆ ಸೇರಿಕೊಂಡಿತು. ಅಂದರೆ ಸಾಮವೇದವೂ ಋಗ್ವೇದದೊಡನೆ ಸೇರಿಕೊಂಡಿತು.

ಮೇಲಿನ ವಿಚಾರಗಳ ಫಲಿತಾಂಶದಿಂದ ಋಗ್ವೇದವು ತಾನೊಂದೇ ಉಳಿದುಕೊಂಡಿರುವ ಸೋಪಾನದ ಸ್ಥಾನವಾಗಿದೆ. ಎಂದರೆ ಎರಡನೆಯದರ ಜ್ಞಾನವಿಲ್ಲದೆ ಅಖಂಡವಾದ ನಾನು ಎಂಬ ಜ್ಞಾನಮಾತ್ರವಾಗಿಯೂ ಆನಂದಮಯವಾಗಿಯೂ ಇರುವ ಪ್ರಜ್ಞಾನದ ಸ್ಥಾನವಾಗಿದೆ. ಇದೇ ಶುದ್ಧ ಸತ್ವಗುಣದ ಶುದ್ಧ ಸತ್ವ ಪ್ರಕೃತಿಯ ವಿದ್ಯೆಯ ಸ್ಥಾನವಾಗಿದೆ ಯೆಂದು ಈಶ್ವರ, ಈಶ್ವರಿಯರ ಸ್ಥಾನವಾಗಿದೆಯೆಂದೂ ಹಿಂದೆ ತಿಳಿಸಿದೆ. ಅವಿದ್ಯಾ ಬಂಧನ ನಿವೃತ್ತಿಯಾಗಿರುವುದರಿಂದ ಇಂತಹ ಈಶ್ವರ ಸ್ಥಾನವೂ ಪರಬ್ರಹ್ಮ ಸ್ಥಾನಕ್ಕೆ ಸಮಾನವಾಗಿ ಮುಕ್ತ ಸೋಪಾನವಾಗಿಯೆ ಇದೆ. ಮುಕ್ತ ಸೋಪಾನವು ಎಂತಹುದೆಂಬುದಕ್ಕೆ ಶ್ರೀ ಶಂಕರಾಚಾರ್ಯರವರು "ಅವಿದ್ಯಾ

ಬಂಧ ನಿವೃತ್ತಿಃ ಕಥಶ್ಚ ಜನನ ಮರಣ ಸಂಸಾರಾ ಭಾವಃ" ಅಂದರೆ ಅವಿದ್ಯೆಯಿಂದುಂ ಟಾಗಿರುವ ಬಂಧನವು ನಿವೃತ್ತಿಯಾಗಿರುವುದರಿಂದ ಹುಟ್ಟು ಸಾವುಗಳೆಂಬ ಸಂಸಾರದ ನಾಶ ಎಂದು ಹೇಳಿರುತ್ತಾರೆ. ಈಶ್ವರ ಸೋಪಾನಕ್ಕೆ ಹತ್ತಿದವರಿಗೆ ಅವಿದ್ಯಾ ಬಂಧ ನವು ನಿವೃತ್ತಿಯಾಗಿರುವುದರಿಂದ ಹುಟ್ಟು ಸಾವುಗಳ ಸಂಸಾರವು ಇರುವುದಿಲ್ಲ. ಆದರೂ ಈಶ್ವರ ಸೋಪಾನಕ್ಕೂ ಹೆಚ್ಚಿನದಾದ ಮತ್ತು ಮೂಲವಾದ ಪರಬ್ರಹ್ಮ ಸೋಪಾನವು ಇದೆಯೆಂಬುದನ್ನು ಸೂಚಿಸುವುದಕ್ಕೋಸ್ಕರ ಈಶ್ವರ ಸೋಪಾನದಿಂದ ಪರಬ್ರಹ್ಮ ಸೋಪಾನಕ್ಕೆ ಧ್ಯಾನದ ಪರಿಪಕ್ವಾವಸ್ಥೆಯಲ್ಲಿ ಹತ್ತಬೇಕು.

ಪ್ರಜ್ಞಾನವೆಂದರೆ ಪ್ರಕೃಷ್ಟವಾಗಿರುವ ಅಖಂಡಾಕಾರವಾಗಿರುವ ಅಹಂಜ್ಞಾನ. ಪರಬ್ರಹ್ಮವೇ ಅಹಂ ಜ್ಞಾನರೂಪವಾಗಿರುವುದೆಂದು ಹಿಂದೆಯೆ ತಿಳಿಸಿದೆಯಷ್ಟೆ. ಪ್ರಜ್ಞಾನಂಬ್ರಹ್ಮ ಎಂಬ ಋಗ್ವೇದದ ಮಹಾವಾಕ್ಯದ ತತ್ವವೇನೆಂದರೆ ಪ್ರಜ್ಞಾನವೆನಿ ಸುವ ಅಹಂ ಜ್ಞಾನವು ಪರಬ್ರಹ್ಮನಲ್ಲಿ ಸೇರುವುದೆಂದರೆ ತನ್ನಲ್ಲಿ ತಾನೇ ಸೇರಿಕೊ ಳ್ಳುವ ತತ್ವವಾಗಿದೆ. ಜ್ಞಾನವು ಜ್ಞಾನದಲ್ಲಿ ಸೇರುವುದರಿಂದ ಇದೇ ಜ್ಞಾನಯಜ್ಞವು. ಇದೇ ಪರಮಾತ್ಮ ಸಾಕ್ಷಾತ್ಕಾರದ ಸ್ಥಿತಿ. ಇದೇ ಸತ್ಯಂಜ್ಞಾನಮನಂತಂ ಬ್ರಹ್ಮದ ಸ್ಥಿತಿ. ಧ್ಯಾನಾನುಷ್ಠಾನ ಪ್ರಾರಂಭ ಮೊದಲುಗೊಂಡು ಪರಮಾತ್ಮ ಸಾಕ್ಷಾತ್ಕಾರದ ವರೆಗಿನ ಸಕಲ ತತ್ವಗಳನ್ನು ಕೆಳಗಿನ ಉಪನಿಷದ್ವಾಕ್ಯವು ಸಮರ್ಥಿಸುವುದು ಮಣ್ಡಲ ಬ್ರಾಹ್ಮಣೋಪನಿಷತ್ತಿನಲ್ಲಿ

**ಶಬ್ದ ಕಾಲ ಲಯೇನ ದಿವಾರಾತ್ರ್ಯತೀತೋಭೂತ್ವಾ ಸರ್ವ ಪರಿಪೂರ್ಣ।**
**ಜ್ಞಾನೇ ನೋನ್ಮನ್ಯವ ಸ್ಥಾವಶೇನ ಬ್ರಹ್ಮೈಕ್ಯಂ ಭವತಿ॥**

ಶಬ್ದ ಕಾಲ ಲಯೇನ– ಓಂಕಾರನಾದವು ಲಯವಾಗುವ ಕಾಲದಲ್ಲಿ, ದಿವಾರಾತ್ರ್ಯತಿ ತೋಭೂತ್ವಾ– ದಿವಾ ಅಂದರೆ ಹಗಲಿನ ತತ್ವದಲ್ಲಿರುವ ರಜೋಗುಣ, ರಾತ್ರಿ–ರಾತ್ರಿ ತತ್ವದಲ್ಲಿರುವ ತಮೋಗುಣ. ಅತೀತೋಭೂತ್ವಾ– ರಜೋಗುಣ ತಮೋಗುಣಗಳನ್ನು ಉಪಸಂಹರಿಸಿದ ನಂತರ ಹೊಂದುವ, ಸರ್ವ ಪರಿಪೂರ್ಣ ಜ್ಞಾನೇನ– ಅಖಂಡಾಕಾರ ವಾಗಿ ವ್ಯಾಪಿಸಿಸುವ ಅಹಂ ಜ್ಞಾನದ, ಉನ್ಮನ್ಯವಸ್ಥಾವಶೇನ— ಆನಂದ ರಸಾಮೃತ ದಿಂದ ಮತ್ತತೆಯಾಗಿರುವ ಸ್ಥಿತಿಯಲ್ಲಿ, ಬ್ರಹ್ಮೈಕ್ಯಂ ಭವತಿ— ಅಹಂ ಜ್ಞಾನವು ಪರಬ್ರಹ್ಮನಲ್ಲಿ ಏಕತ್ವವನ್ನು ಪಡೆಯುವುದು. ಮೇಲಿನ ಶ್ರುತಿವಾಕ್ಯವು ಅನುಷ್ಠಾನದ ಸಕಲ ತತ್ವಗಳನ್ನೂ ಒಳಗೊಂಡಿರುವುದು. ಪರಬ್ರಹ್ಮ ಸಾಕ್ಷಾತ್ಕಾರದ ಸ್ಥಿತಿಯು ಹೇಗಿರುವುದೆಂದರೆ ತೈತ್ತಿರಿಯೋಪನಿಷತ್ತಿನ ಶಿಕ್ಷಾವಲ್ಲಿಯಲ್ಲಿ ತಿಳಿಸುವ

**ಆಕಾಶ ಶರೀರಂ ಬ್ರಹ್ಮ ।**
**ಸತ್ಯಾತ್ಮ ಪ್ರಾಣಾರಾಮಂ ಮನ ಆನನ್ದಮ್ ।**
**ಶಾಂತಿ ಸಮೃದ್ಧ ಮಮೃತಮ್ ।**

ಆಕಾಶ ಶರೀರಂ ಬ್ರಹ್ಮ— ಆಕಾಶದಂತೆ ಪರಬ್ರಹ್ಮದ ಶರೀರವು ಅತ್ಯಂತ ಸೂಕ್ಷ್ಮವಾಗಿಯೂ, ಸರ್ವವ್ಯಾಪಕವಾಗಿಯೂ ಆಗಿರುವುದು. ಸತ್ಯಾತ್ಮ— ಯಾವ ಕಾಲದಲ್ಲೂ ವ್ಯತ್ಯಾಸವಾಗದೆ ಒಂದೇ ವಿಧವಾದ ರೂಪಿನಲ್ಲಿರುವುದು. ಪ್ರಾಣಾರಾಮಂ— ಪ್ರಾಣವೆಂದರೆ ದೇಹದಲ್ಲಿರುವ ಸಕಲ ಶಕ್ತಿಗಳೂ ಅಹಂ ಜ್ಞಾನದೊಡಗೂಡಿ ಅಭೇದವಾಗಿ ಆನಂದ ರೂಪದ ವಿಶ್ರಾಂತಿಯಲ್ಲಿರುವುವು. ಮನ ಆನಂದಂ— ಬುದ್ಧಿ ವೃತ್ತಿಯೂ ಮತ್ತು ಅಹಂ ಜ್ಞಾನವೂ ಆನಂದರೂಪವಾಗಿರುವುವು, ಶಾಂತಿಸಮೃದ್ಧ- ಪರಬ್ರಹ್ಮವು ಅತ್ಯಂತ ಉಪಶಾಂತತೆಯ ಸ್ವರೂಪವಾದುದು, ಅಮೃತಂ— ಜನನ ಮರಣ ವಾಗುವಿಕೆಗೆ ಮೃತವೆಂದು ಹೆಸರು. ಇಂತಹ ಜನನ ಮರಣಗಳನ್ನು ನಾಶಮಾಡುವ ಆನಂದರಸದಲ್ಲಿ ಮುಳುಗಿರುವಿಕೆಯ ಸ್ಥಿತಿಯಾಗಿರುವುದು.

ಪರಬ್ರಹ್ಮದ ಸಾಕ್ಷಾತ್ಕಾರದ ಸ್ಥಿತಿಯು ಮೇಲೆ ವಿವರಿಸುವಂತೆ ಇರುವುದು. ಇದುವರೆಗೆ ಋಗ್ವೇದ, ಯಜುರ್ವೇದ, ಸಾಮವೇದ ಈ ಮೂರು ವೇದಗಳ ವಿಚಾರಗಳು ಬಂದಿರುವುವೇ ವಿನಹ ಅಥರ್ವಣ ವೇದದ ವಿಚಾರವು ಬಂದಿಲ್ಲ. ಇದರ ವಿಚಾರವನ್ನು ತಿಳಿದುಕೊಳ್ಳೋಣ. ಕರ್ಮಕಾಂಡದ ಯಜ್ಞದಲ್ಲಿ ಋಗ್ವೇದದ ಕಾರ್ಯ ಮಾಡುವವನಿಗೆ ಹೋತೃವೆಂತಲೂ, ಯಜುರ್ವೇದದ ಕಾರ್ಯಮಾಡುವವನಿಗೆ ಅಧ್ವರ್ಯು ವೆಂತಲೂ, ಸಾಮವೇದದ ಕಾರ್ಯ ಮಾಡುವವನಿಗೆ ಉದ್ಗಾತೃ ವೆಂತಲೂ, ಅಥರ್ವಣ ವೇದದ ಕಾರ್ಯ ಮಾಡುವವನಿಗೆ ಬ್ರಹ್ಮನೆಂತಲೂ ಹೆಸರುಗಳಿವೆಯೆಂದು ಹಿಂದೆಯೆ ತಿಳಿಸಿರುತ್ತೇವೆ. ಬ್ರಹ್ಮನ ಸ್ಥಾನದಲ್ಲಿರುವವನ ಕೆಲಸವೇನೆಂದರೆ ಯಜ್ಞ ಕರ್ಮದಲ್ಲಿ ನಡೆಯುವ ಸಕಲ ಕಾರ್ಯಗಳು ಶಾಸ್ತ್ರಕ್ಕೆ ಅನುಸಾರವಾಗಿ ನಡೆಯುತ್ತಿದೆಯೆ ಎಂಬುದನ್ನು ಪರೀಕ್ಷಿಸುತ್ತಾ ಆಕಸ್ಮಾತ್ ಲೋಪಗಳು ಪ್ರಾಪ್ತವಾದರೆ ಅವುಗಳನ್ನು ಸರಿಪಡಿಸುತ್ತಾ ಆ ಯಜ್ಞಕರ್ಮವು ಸಾಂಗವಾಗಿ ನೆರವೇರುವಂತೆ ಮಾಡಿ ಮಂಗಳವನ್ನುಂಟು ಮಾಡುವವನು ಬ್ರಹ್ಮನ ಸ್ಥಾನದಲ್ಲಿ ಇರುತ್ತಾನೆ. ಸರ್ವ ವಿಚಾರಗಳನ್ನು ತಿಳಿದುಕೊಂಡು ಸರ್ವ ಕಾರ್ಯವನ್ನು ಸಾಂಗವಾಗಿ ಮಾಡಿಸುವವನಾದುದರಿಂದ ಅವನಿಗೆ ಸರ್ವೈರ್ಬ್ರಹ್ಮ ಎಂಬ ಹೆಸರು ಬಂದಿದೆ.

ಅಥರ್ವಣ ಎಂಬ ಪದಕ್ಕೆ "ಥರ್ವತಿ ಶ್ಚರತಿ ಕರ್ಮತತ್ಪ್ರತಿಷೇಧಃ" ಎಂಬ

ನಿರುಕ್ತವಚನದಂತೆ ಸಕಲ ಸಂಶಯ ನಿವರ್ತಕವಾದುದು. ಅಲ್ಲದೆ ಅಥರ್ವಣ ಎನು ವುದಕ್ಕೆ "ಅಥಲೋಕ ಮಂಗಳಾಯ ಅರ್ವತೇಪ್ರಸೂಯತೇ ಇತಿಯತ್ ಸ ಅಥರ್ವಃ ಕರ್ಮಣ ಅನಿಪ್ ಶಕಂದ್ವಾದಿತ್ವಾತ್ ಪರರೂಪಂ ಅಥರ್ವಣಃ ಶಿವಃ" ಅಂದರೆ ಸಂಕ ಲ್ಪವನ್ನು ಅನುಸರಿಸಿ ಮಂಗಳವನ್ನು ಉಂಟುಮಾಡುವುದು. 'ಅಥ' ಶಬ್ದವೆ ಮಂಗ ಳವಾಚಕವಾದುದು. ಕರ್ಮಕಾಂಡದ ಯಜ್ಞದ ವಿಚಾರವನ್ನು ಮೇಲೆ ತಿಳಿಸಿರುತ್ತೇವೆ ಈಗ ಜ್ಞಾನಕಾಂಡಕ್ಕೆ ಸೇರಿದ ಯೋಗ ಯಜ್ಞದಲ್ಲಿ ಅಥರ್ವಣ ವೇದದ ತತ್ವವು ಅನ್ವಯ ವಾಗುವುದು. ಮಂಗಳರೂಪವಾದ ಪರಮಾತ್ಮ ಸಾಕ್ಷಾತ್ಕಾರವಾಗ ಬೇಕಾ ದಲ್ಲಿ "ಆತ್ಮ ತತ್ವೋಪದೇಶ" ಸೋಪಾನದಿಂದ ಪರಮಾತ್ಮ ಸ್ಥಿತಿಯುಂಟಾಗುವ ವರಿಗೂ ಪ್ರತಿಯೊಂದು ಸೋಪಾನದ ಕಾರ್ಯಗಳಲ್ಲೂ ಲೋಪ ದೋಷಗಳುಂಟಾಗ ದಂತೆ ಅನುಷ್ಠಾನದಲ್ಲಿ ಅನುಭವವುಳ್ಳ ಗುರುವು ಶಾಸ್ತ್ರ ನಿಯಮಕ್ಕೆ ಅನುಸಾರವಾಗಿ ಶಿಷ್ಯನಿಗೆ ಭೋಧಿಸಿಯೂ ಅನುಷ್ಠಾನದ ಕ್ರಮವನ್ನು ತೋರಿಸಿಯೂ ಕೊಡಬೇಕು. ಶಿಷ್ಯನು ಗುರುವಿನ ಬೋಧೆಯನ್ನು ಚೆನ್ನಾಗಿ ವಿಮರ್ಶಾತ್ಮಕವಾಗಿ ಗುರುವಿನಿಂದ ತಿಳಿದು ಧೃಡಪಡಿಸಿಕೊಂಡು ನಿಯಮಕ್ಕೆ ಅನುಸಾರವಾಗಿ ಯೋಗವನ್ನು ಅನುಷ್ಠಿಸ ಬೇಕು. ಅಲ್ಲದೆ ಶಿಷ್ಯನು ಯೋಗಾನುಷ್ಠಾನು ಕ್ರಮಕ್ಕೆ ಸಹಾಯಕವಾಗಿರುವ ಶ್ರೀಕೃಷ್ಣ ಪರಮಾತ್ಮನು ಗೀತಾದಲ್ಲಿ ನಿಯತಾಹಾರ, ಯುಕ್ತಾಹಾರ, ವಿಹಾರಸ್ಯ ಯುಕ್ತ ಚೇಷ್ಟ ಸ್ಯಕರ್ಮಸು, ವಿವಕ್ತ ಸೇವಿಲಘ್ವಾಸಿ ಎಂಬುದಾಗಿ ಹೇಳಿರುವ ಆಹಾರ ವ್ಯವಹಾರಗಳ ಲ್ಲೂ ನಿಯಮವಂತನಾಗಿರಬೇಕು. ಅನುಷ್ಠಾನ ಕ್ರಮದಲ್ಲಾಗಲೀ, ಆಹಾರ ವ್ಯವಹಾರ ಗಳಲ್ಲಾಗಲೀ ಹಾಗೆ ನಿಯಮವಂತನಾಗದಿದ್ದರೆ ಉದ್ದಿಷ್ಟವಾದ ಪರಮಾತ್ಮ ಸಾಕ್ಷಾ ತ್ಕಾರಕ್ಕೆ ಅಡ್ಡಿಯಾಗುವುದು. ಇಂತಹ ನಿಯಮದ ಕಟ್ಟಳೆಗಳೆ ಅಥರ್ವಣ ವೇದ ಸ್ವರೂಪ. ಇಂತಹ ನಿಯಮದ ಕಟ್ಟಳೆಗಳೆ ಮಂಗಳ ಸ್ವರೂಪವಾದ ಪರಮಾತ್ಮ ಸಾಕ್ಷಾತ್ಕಾರವನ್ನು ಉಂಟುಮಾಡುವುವು. ಇಂತಹ ನಿಯಮದ ಕಟ್ಟಳೆಯು ಪರ ಬ್ರಹ್ಮಸ್ವರೂಪವೇ ಆಗಿದೆ. ಆದುದರಿಂದ ಅಥರ್ವಣ ವೇದವೂ ಕೂಡ ಋಗ್ವೇದ ದೊಡನೆ, ಎಂದರೆ ಪ್ರಜ್ಞಾನದೊಡನೆ ಸೇರಿ ಪರಬ್ರಹ್ಮಸ್ವರೂಪವಾಗುವುದು.

## ವೇದದ ಮಹಾವಾಕ್ಯಗಳತತ್ವಕ್ಕೂ ಭಗವದ್ಗೀತಾ ವಾಕ್ಯ ಗಳಿಗೂ ಸಮನ್ವಯ

ಭಗವದ್ಗೀತಾದಲ್ಲಿ ತಿಳಿಸಿರುವ ಯೋಗಯಜ್ಞ, ತಪೋಯಜ್ಞ ಸ್ವಾಧ್ಯಾಯ ಯಜ್ಞ, ಜ್ಞಾನಯಜ್ಞಗಳನ್ನು ನಾಲ್ಕು ವೇದಗಳ ಮಹಾ ವಾಕ್ಯಗಳೊಂದಿಗೆ ಸಮನ್ವ ಯ ಮಾಡಿ ಮೇಲೆ ಬರೆದಿರುವುದಷ್ಟೆ. ಭಗವದ್ಗೀತೆಯಲ್ಲಿರುವ ಕೆಲವು ಮುಖ್ಯವಾದ

ತತ್ವಸೂಚಕವಾದ ವಾಕ್ಯಗಳನ್ನು ವೇದದ ಮಹಾವಾಕ್ಯಗಳ ವಿಚಾರಕ್ಕೆ ಸಮನ್ವಯ ವಾಗುವುದೆಂಬುದನ್ನು ತಿಳಿಸೋಣ. ಗೀತಾ 4-31 ನೇ ಶ್ಲೋಕದಲ್ಲಿ ‹‹ಯಜ್ಞ ಶಿಷ್ಟಾಮೃತ ಭುಜೋಯಾಂತಿ ಬ್ರಹ್ಮ ಸನಾತನಮ್ ”ಅಂದರೆ ಹಿಂದೆ ಹೇಳಿದ ಯೋಗ ಯಜ್ಞ ಮುಂತಾದವು ಗಳನ್ನು ಅನುಷ್ಠಿಸಿ ಅಮೃತ ಪ್ರಾಯವಾದ ಯಜ್ಞಶೇಷವನ್ನು ಯಾರು ಭುಂಜಿಸುವರೋ ಅವರು ಪರಬ್ರಹ್ಮವನ್ನು ಹೊಂದುವರು ಎಂದು ಹೇಳಿದೆ. ವೇದದ ಮಹಾ ವಾಕ್ಯಗಳ ತತ್ವಗಳಲ್ಲಿ ಕ್ರಿಯಾರೂಪವಾದ ಯಜುರ್ವೇದದ ಕಾರ್ಯವು ಸಾಮವೇದದ ಕಾರ್ಯದೊಡಗೂಡಿ ಹೊಂದಲ್ಪಡುವ ಋಗ್ವೇದದ ಪ್ರಜ್ಞಾನ ಸ್ಥಿತಿಯೆ ಶೇಷವಾಗಿ ನಿಲ್ಲುವುದು. ಹೀಗೆ ಶೇಷವಾಗಿನಿಲ್ಲುವುದರಿಂದ ಇದೇ ಯಜ್ಞ ಶಿಷ್ಟವೆನಿಸುವುದು. ಈ ಪ್ರಜ್ಞಾನವೆನಿಸುವ ಸಮಾಧಿ ಸ್ಥಿತಿಯಲ್ಲಿ ಅಧಿಕಾರಿಯು ಆನಂದಾಮೃತದಲ್ಲಿ ಮುಳುಗಿ ಆ ಸ್ಥಿತಿಯನ್ನು ಅನುಭವಿಸುತ್ತಿರುವಿಕೆಯೆ ಯಜ್ಞಶೇಷವನ್ನು ಭುಂಜಿಸುವಿಕೆಯಾಗಿದೆ. ಈ ಭುಂಜಿಸುವಿಕೆಯಿಂದ ಸಂದೇಹವಿಲ್ಲದೆ ಪರಬ್ರಹ್ಮವನ್ನು ಹೊಂದುವನು. ಕರ್ಮಕಾಂಡದ ಯಜ್ಞಮಾಡಿ ಶೇಷವನ್ನು ಭುಂಜಿಸುವಿಕೆಹೆ ಈ ಗೀತಾವಾಕ್ಯವು ಖಂಡಿತಾ ಅನ್ವಯಿಸುವುದಿಲ್ಲ. ಗೀತಾ 4–33 ರಲ್ಲಿ ‘‘ಸರ್ವಂಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ’’ ಅಂದರೆ ಜ್ಞಾನದಲ್ಲಿ ಸಮಸ್ತಕರ್ಮಗಳೂ ಪರಿಸಮಾಪ್ತಿಯನ್ನು ಹೊಂದುತ್ತವೆ. ಎಂದು ಹೇಳಿರುವಿಕೆಯು ಇಂದ್ರಿಯಗಳ ಕಾರ್ಯ ದೇವಕಾರ್ಯ ಯೋಗಾನುಷ್ಠಾನದ ಕಾರ್ಯ ಮುಂತಾದ ಸಕಲ ಕರ್ಮಗಳೂ ಪ್ರಜ್ಞಾನದಲ್ಲಿ ಪರಿಸಮಾಪ್ತಿಗೊಳ್ಳುವುದೆಂಬ ತಾತ್ಪರ್ಯವಾಗಿದೆ. ಗೀತಾ 4–38 ರಲ್ಲಿ

**ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**
**ತತ್ ಸ್ವಯಂ ಯೋಗ ಸಂಸಿದ್ಧಃ ಕಾಲೆ ನಾತ್ಮನಿ ವಿಂದತಿ ॥**

ತಾತ್ಪರ್ಯ॥ ಈ ಲೋಕದಲ್ಲಿ ಜ್ಞಾನಕ್ಕೆ ಸಮಾನವಾದ ಪವಿತ್ರ ವಸ್ತುವು ಇರುವುದಿಲ್ಲ. ಧ್ಯಾನಯೋಗಾನುಷ್ಠಾನ ಮಾಡುವವನು ಕಾಲಕ್ರಮದಲ್ಲೆಂದರೆ ಅನುಷ್ಠಾನದ ಪರಿಪಕ್ವಾವಸ್ಥೆಯಲ್ಲಿ ಆತ್ಮಸ್ವರೂಪವಾದ ಜ್ಞಾನವನ್ನು ತಾನೇ ತನ್ನೊಳಗೆ ಹೊಂದುತ್ತಾನೆ ಎಂದು ಹೇಳಿದೆ. ಇದು ಜ್ಞಾನದ ಶ್ರೇಷ್ಠತೆಯನ್ನು ಸೂಚಿಸುವುದು. ಈ ಗೀತಾಶ್ಲೋಕದತತ್ವವು ಯಜುರ್ವೇದದ ತತ್ವದಲ್ಲಿರುವ ಅಹಂ ಬ್ರಹ್ಮಾಸ್ಮಿ ಜ್ಞಾನದೊಡನೆ ಧ್ಯಾನಯೋಗವನ್ನು ಅಭ್ಯಾಸಮಾಡುವವನು ಅಭ್ಯಾಸಾಭಿವೃದ್ಧಿಯ ಕಾಲವನ್ನು ಅನುಸರಿಸಿ ತಾನೇ ತನ್ನಲ್ಲಿ ಪ್ರಜ್ಞಾನಂಬ್ರಹ್ಮದ ತತ್ವದ ಪರಮಾತ್ಮ ಸಾಕ್ಷಾತ್ಕಾರವನ್ನು ಹೊಂದುವುದಕ್ಕೆ ಅನ್ವಯವಾಗುವುದು. ಯೋಗದ ವಿಚಾರವು

ಗೀತಾ 8-24 ರಿಂದ 28 ರ ಶ್ಲೋಕದ ವರೆಗೂ ಮತ್ತು ಗೀತಾ 6 ನೇ ಅಧ್ಯಾಯ 10 ನೇ ಶ್ಲೋಕ ದಿಂದ 47 ನೇ ಶ್ಲೋಕದವರೆಗೂ ಇರುವುದು. ಈ ಶ್ಲೋಕಗಳಲ್ಲಿ ಯೋಗಾಭ್ಯಾಸಕ್ಕೆ ಅಧಿಕಾರಿ ಯಾಗಲು ಇರಬೇಕಾದ ಲಕ್ಷಣ ಯೋಗಾಭ್ಯಾಸದ ಕ್ರಮ ಮತ್ತು ಯೋಗದ ಮಹಿಮೆ ಈ ವಿಚಾರಗಳೆಲ್ಲಾ ಬಂದಿವೆ. 5 ನೇ ಅಧ್ಯಾಯದ 27, 28 ನೇ ಶ್ಲೋಕಗಳು ಯೋಗ ಸಾಧನಾ ಕ್ರಮವನ್ನು ಮತ್ತು ಈ ಅಧ್ಯಾಯದ ಇತರ ಶ್ಲೋಕಗಳು ಯೋಗ ಮತ್ತು ಜ್ಞಾನಮಾರ್ಗಕ್ಕೆ ಇರಬೇಕಾದ ಅರ್ಹತೆಗಳನ್ನು ಸೂಚಿಸುತ್ತವೆ. 2-55 ರಲ್ಲಿ ಸ್ಥಿತಪ್ರಜ್ಞನ ಸ್ವರೂಪವನ್ನು ತಿಳಿಸುವಾಗ "ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಮನೋಗತಾನ್" ಎಂದು ಹೇಳಿದೆ. ಮನಸ್ಸಿಗೆ ಬರುವ ಕಾಮವೆಂದರೆ ವಿಷಯಗಳನ್ನು ಚೆನ್ನಾಗಿ ಬಿಡಬೇಕಾದರೆ ಯಜುರ್ವೇದ ತತ್ವವಾದ ಯೋಗಾನುಷ್ಠಾನುದಿಂದ ಅವಿದ್ಯಾ ನಿಗ್ರಹವಾದಲ್ಲದೆ ವಿಷಯಗಳು ಹೋಗುವುದಿಲ್ಲ. ಅವಿದ್ಯಾನಿಗ್ರಹವಾದ ನಂತರವೆ ತನ್ನಲ್ಲಿಯೆ ತಾನು ನಿಲ್ಲುವ ಸ್ಥಿತಪ್ರಜ್ಞತ್ವವು ಲಭಿಸುವುದು. ಆದುದರಿಂದ ಸ್ಥಿತಪ್ರಜ್ಞನೆನಿಸಿಕೊಳ್ಳುವುದಕ್ಕೂ ಯೋಗದ ಸಹಾಯ ಬೇಕು. 2-55ರಿಂದ ಮುಂದಿನ ಶ್ಲೋಕಗಳಲ್ಲೆಲ್ಲಾ ಸ್ಥಿತ ಪ್ರಜ್ಞನ ಲಕ್ಷಣಗಳನ್ನು ಹೇಳಿರುತ್ತಾನೆ.

ಯಜುರ್ವೇದದ ತತ್ವವಾದ ಯೋಗಾನುಷ್ಠಾನ ಮಾರ್ಗದಲ್ಲಿ ಇರುವವನು ಜೀವಂತ ನಾಗಿದ್ದಾಗಲೇ ಪ್ರಜ್ಞಾನಂ ಬ್ರಹ್ಮದ ಸ್ಥಿತಿಯಾದ ಪರಬ್ರಹ್ಮದ ಸಾಕ್ಷಾತ್ಕಾರವನ್ನು ಹೊಂದಲು ಯತ್ನವಾಗದಿದ್ದರೆ ಪ್ರಾಣೋತ್ಕ್ರಮಣ ಕಾಲದಲ್ಲಾದರೂ ಸಾಧ್ಯವಾಗುತ್ತೆಂದು 8ನೇ ಅಧ್ಯಾಯ 10-13 ನೇ ಶ್ಲೋಕಗಳಲ್ಲೂ ಮತ್ತು 2-72 ನೇ ಶ್ಲೋಕದಲ್ಲೂ ಹೇಳಿರುತ್ತಾನೆ. 8-10 ರಲ್ಲಿ ಮನಸ್ಸಿನ ಚಂಚಲತ್ವವಿಲ್ಲದೆ ಪರಮಾತ್ಮನೆ ನಾನಾಗ ಬೇಕೆಂಬ ಭಕ್ತಿಯಿಂದಲೂ ಯೋಗಬಲದಿಂದಲೂ ಭ್ರೂಮಧ್ಯದಲ್ಲಿ ಶ್ವಾಸೋಚ್ಛ್ವಾಸವನ್ನು ನಿಲ್ಲಿಸಿಕೊಂಡು ಜ್ಯೋತಿರ್ಮಯನಾದ ಪರಮಾತ್ಮನೆ ನಾನೆಂಬ ಜ್ಞಾನದಿಂದ ಮುಳುಗಿದರೆ ಪರಮಾತ್ಮನನ್ನು ಹೊಂದುತ್ತಾನೆಂತಲೂ 8-13 ರಲ್ಲಿ ಓಂಕಾರೋಚ್ಚಾರಣೆಯಿಂದ ಸರ್ವೇಂದ್ರಿಯ ದ್ವಾರಗಳನ್ನು ಬಂಧಿಸಿಕೊಂಡು ಮನಸ್ಸನ್ನು ಶ್ವಾಸೋಚ್ಛ್ವಾಸವನ್ನು ಓಂಕಾರೋಚ್ಚಾರಣೆಯ ಅಗ್ರದಲ್ಲಿ ಶಿರಸ್ಸಿನ ನೆತ್ತಿಯಲ್ಲಿ ನಿಲ್ಲಿಸಿ ಪ್ರಾಣೋತ್ಕ್ರಮಣ ಕಾಲದಲ್ಲಿ ನಾನೇ ಬ್ರಹ್ಮನೆಂಬ ಭಾವದಲ್ಲಿ ಯಾವನು ಮುಳುಗುತ್ತಾನೊ ಅವನು ಪರಬ್ರಹ್ಮನನ್ನು ಹೊಂದುತ್ತಾನೆ ಎಂದು ಹೇಳಿದಾನೆ ಪ್ರಾಣೋತ್ಕ್ರಮಣ ಕಾಲದ ಸ್ಥಿತಿಯನ್ನು ಅನುಸರಿಸಿ ಮೇಲಿನ ಎರಡು ವಿಧದಲ್ಲಿ ಯಾವುದು ಅನುಕೂಲವಾಗುತ್ತೊ ಅದರಂತೆ ಮಾಡುತ್ತಾರೆ.

ಯಜುರ್ವೇದದ ತತ್ವದ ಯೋಗದಲ್ಲಿ ಬರುವ ಪ್ರಾಣಾಯಾಮ ಮಂತ್ರದ

ಅನುಷ್ಠಾನುಗಳನ್ನು ಮಾಡಲು ಅಶಕ್ತನಾದವನು ಭ್ರೂಮಧ್ಯದಲ್ಲಿ ದೃಷ್ಟಿಯನ್ನಿಟ್ಟು ಕೊಂಡು ಕೊಂಚ ಕೊಂಚ ಧ್ಯಾನಾಭ್ಯಾಸವನ್ನು ಮಾಡುವ ಅವಕಾಶವೂ ಗೀತೆಯ ಲ್ಲಿದೆ. 'ವೇದಾ ನಾಂ ಸಾಮವೇದೋಽಸ್ಮಿ' ವೇದಗಳಲ್ಲಿ ನಾನು ಸಾಮವೇದ ಸ್ವರೂಪ ಎಂದು ಶ್ರೀಕೃಷ್ಣನು ಹೇಳಿರುತ್ತಾನೆ. ಸಾಮವೇದವು ''ತತ್ವಮಸಿ'' ಮಹಾವಾಕ್ಯದ ತತ್ವವನ್ನೊಳಗೊಂಡು ತನಗೂ ಪರಮಾತ್ಮನಿಗೂ ಏಕೀಕರಣವಾಗುವ ಭಕ್ತಿಯ ಸ್ವರೂಪದ್ದಾಗಿಯೂ ಇರುವುದು. ಸಾಮವೇದದ ಮಹತ್ವಕ್ಕೆ ತತ್ವಮಸಿ ಮಹಾ ವಾಕ್ಯದ ಉಪದೇಶ ಮತ್ತು ಸಾಮವೇದವು ಯಜುರ್ವೇದಕ್ಕೆ ಸಹಾಯಕವಾಗಿರುವ ವಿಚಾರಗಳನ್ನು ಪರಿಶಿಸಿದರೆ ಸಾಮವೇದದ ಮಹಿಮೆಯು ಗೊತ್ತಾಗುವುದು. ಆರ್ತ, ಜಿಜ್ಞಾಸು, ಅರ್ಥಾರ್ಥಿ ಜ್ಞಾನಿ ಈ ನಾಲ್ವರೂ ನನ್ನ ಭಕ್ತರೆಂದು 7—16 ರಲ್ಲಿ ಹೇಳಿ 7—18 ರಲ್ಲಿ ಜ್ಞಾನಿಯಾದ ಭಕ್ತನು ನಾನೆ ಎಂದು ಹೇಳಿರುತ್ತಾನೆ. ಗೀತಾ 4—36 ರಲ್ಲಿ

**ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ।**

**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯತಿ॥**

ನೀನು ಪಾಪವನ್ನು ಮಾಡುವುದರಲ್ಲಿ ಅತ್ಯಂತ ಪಾಪಮಾಡತಕ್ಕವನಾಗಿದ್ದರೂ ಜ್ಞಾನರೂಪವಾದ ನಾವೆಯ ಸಹಾಯದಿಂದ ಪಾಪ ಸಮುದ್ರವನ್ನು ದಾಟುವೆ ಎಂದು ಹೇಳಿರುವನು. ಇಲ್ಲಿ ಜ್ಞಾನರೂಪವಾದ ನಾವೆ ಎಂದಿದೆ. ನಾವೆಯ ಸ್ವರೂಪವು ಎಂತಹುದೆಂದರೆ ಪರಮಾತ್ಮನನ್ನು ಹೊಂದುವಂತಹ ಜ್ಞಾನದ್ದಾಗಿರ ಬೇಕಲ್ಲದೆ ಪರಮಾತ್ಮ ಜ್ಞಾನದ್ದೆಂದು ಹೇಳುವುದಕ್ಕಾಗುವುದಿಲ್ಲ. ಆದ್ದರಿಂದ ಸಾಮವೇದದ ತತ್ವಮಸಿ ಮತ್ತು ಯಜುರ್ವೇದದ ಅಹಂ ಬ್ರಹ್ಮಾಸ್ಮಿ ಎಂಬ ಎರಡು ಜ್ಞಾನದ ತತ್ವ ಗಳಿಂದ ನಿರ್ಮಿಸಲ್ಪಟ್ಟ ನಾವೆಯಾಗಿರುತ್ತದೆ. ಈ ಎರಡು ತತ್ವಗಳಿಂದಲೇ ಅವಿದ್ಯೆ ಯ ನಿಗ್ರಹವಾಗುವುದರಿಂದ ಎರಡು ವೇದಗಳ ಮಹಾ ವಾಕ್ಯಗಳ ತತ್ವಗಳಿಂದ ನಾವೆ ಯು ನಿರ್ಮಿಸಲ್ಪಟ್ಟಿದೆ ಈ ನಾವೆಯಿಂದಲೇ ಪಾಪ ಸಮುದಾಯವೂ ನಾಶವಾಗು ವುದು. ಇದರಲ್ಲಿ ಸಂಶಯವಿಲ್ಲ.

ಗೀತಾ 18—36, 37 ರಲ್ಲಿ ಮೂರು ವಿಧವಾದ ಸುಖದ ವಿಚಾರವನ್ನು ಅರ್ಜುನನಿಗೆ ಉಪದೇಶಿಸುತ್ತಾನೆ. ಯೋಗಾನುಷ್ಠಾನದ ಪ್ರಥಮದಲ್ಲಿ ಅಭ್ಯಾಸವು ಕಷ್ಟವಾದದ್ದಾಗಿಯೂ ಅನುಷ್ಠಾನದ ಅಂತ್ಯವನ್ನು ಹೊಂದಿ ಪರಮಾತ್ಮ ಸಾಕ್ಷಾತ್ಕಾರ ವಾದಾಗ ಅಮೃತಕ್ಕೆ ಸಮಾನವಾದ ಯಾವ ಸುಖವಿರುವುದೋ ಅದು ಸಾತ್ವಿಕವೆ

ನಿಸುವುದು ಎಂದು ಹೇಳಿರುತ್ತಾನೆ. ವಿಷಯ ಭೋಗಗಳ ಸಂಬಂಧದಿಂದ ಪ್ರಥಮ ದಲ್ಲಿ ಅಮೃತದಂತೆ ತೋರಿ ಪರಿಣಾಮದಲ್ಲಿ ರೋಗಾದಿ ಕಷ್ಟಗಳಿಗೊಳಗಾಗುವುದ ರಿಂದ ಈ ಸುಖವು ರಾಜಸವೆನಿಸುವುದು ಎಂದು ಹೇಳಿರುತ್ತಾನೆ ಆದುದರಿಂದ ಯೋಗಾಭ್ಯಾಸದ ಪ್ರಥಮದಲ್ಲಿ ನಿಯಮದಿಂದ ಕಷ್ಟಪಟ್ಟು ಅಭ್ಯಾಸ ಮಾಡಿದರೆ ಅಂತ್ಯದಲ್ಲಿ ಅಮೃತಮಯವಾದ ಸುಖವು ಲಭಿಸುವುದು. ಇದರಲ್ಲಿ ಸಂಶಯವಿಲ್ಲ. ಗೀತಾದಲ್ಲಿ ಗೂಢವಾದ ಇನ್ನೂ ಎಷ್ಟೋ ವಿಚಾರಗಳಿವೆ. 8–24 ರಲ್ಲಿ ತಿಳಿಸುವ ಉತ್ತರಾಯಣ ಮಾರ್ಗವು ಸುಷುಮ್ನಾ ನಾಡಿಯ ತತ್ವದ್ದೇ ಆಗಿರುವುದು. 8-3 ರಲ್ಲಿ ತಿಳಿಸುವ 'ವಿಸರ್ಗಃ ಕರ್ಮಸಜ್ಞಿತಃ' ಎಂಬ ವಾಕ್ಯದಲ್ಲಿನ ವಿಸರ್ಗಾಕ್ಷರವೆಂದರೆ ಅಃ ಅಕ್ಷರವು ಪರಾಶಕ್ತಿಯ ಕ್ರಿಯಾಶಕ್ತಿಯಾಗಿರುವುದು. ಗೀತಾದಲ್ಲಿರುವ ಕ್ಷೇತ್ರಜ್ಞ ಸ್ವರೂಪವು ಋಗ್ವೇದ ಮಹಾವಾಕ್ಯದ ಪ್ರಜ್ಞಾನ ಸ್ವರೂಪವೇ ಆಗಿದೆ. ಈ ತತ್ವ ಗಳನ್ನು ಮುಂದೆ ವಿವರಿಸಿರುವುದು.

## ಐ ತ ರೇ ಯೋ ಪ ನಿ ಷ ತ್ತಿ ನ ವಿ ಚಾ ರ

**ಯದೇತದ್ ಹೃದಯಂ ಮನಶ್ಚೈ ತತ್। ಸಂಜ್ಞಾನ್ ಮಾಜ್ಞಾನಂ ವಿಜ್ಞಾನಂ ಪ್ರಜ್ಞಾನಂ ಮೇಧಾ ದೃಷ್ಟಿ ರ್ಧೃತಿರ್ಮನಿಷಾ ಜೂತಿಃ ಸ್ಮೃತಿಃ ಸನ್ಕಲ್ಪಃ ಕ್ರತುರಸುಃ ಕಾಮೋವಶಇತಿ। ಸರ್ವಾಣ್ಯೇವೈತಾನಿ ಪ್ರಜ್ಞಾನಸ್ಯ ನಾಮಧೇಯಾನಿ ಭವನ್ತಿ ॥2॥**

ಅರ್ಥ॥ ಅದೇ ಈ ಹೃದಯವು ಮತ್ತು ಈ ಮನಸ್ಸು ಸಂಜ್ಞಾನ, ಆಜ್ಞಾನ, ವಿಜ್ಞಾನ, ಪ್ರಜ್ಞಾನ, ಮೇಧಾ, ದೃಷ್ಟಿ, ಧೃತಿ ಮತಿ, ಮನೀಷಾ, ಜೂತಿ, ಸ್ಮೃತಿ, ಸನ್ಕಲ್ಪ, ಕ್ರತು, ಅಸು, ಕಾಮ, ವಶ ಈ ಪ್ರಕಾರದ ಇವೆಲ್ಲವೂ ಪ್ರಜ್ಞಾನದ ಹೆಸರು ಗಳಾಗಿವೆ. 'ಯದೇತದ್ ಹೃದಯಂ ಮನಶ್ಚೈತತ್' ಎಂಬ ಮಂತ್ರದ ಮುಖ್ಯ ತತ್ವವೇನೆಂದರೆ-ಹೃದಯವೆಂದರೆ 'ಹೃತ್ಆಯತೀತಿ ಹೃದಯಂ' ಎಂಬ ವ್ಯುತ್ಪತ್ತಿ ಯಂತೆ ಎಲ್ಲಾದಕ್ಕೂ ಪ್ರಧಾನವಾಗಿ ಒಳಗಡೆ ಇರುವುದು. ಮನವೆಂದರೆ 'ಮನ ಜ್ಞಾನೆ ಅವಬೋಧನೆ' ಎಂಬ ವ್ಯುತ್ಪತ್ತಿಯಂತೆ ಜ್ಞಾನಪ್ರಕಾಶಕವಾಗಿ ಇರುವುದು. ಅಂದರೆ ಎಲ್ಲಾದಕ್ಕೂ ಪ್ರಧಾನವಾಗಿ ಒಳಗಡೆ ಜ್ಞಾನಪ್ರಕಾಶಕವಾಗಿ ಇರುವುದೇ ಈ ಅಖಂ ಜ್ಞಾನಸ್ವರೂಪವಾದ ಪ್ರಜ್ಞಾನವು. ಈ ಪ್ರಜ್ಞಾನದ ಮಹಿಮಾರೂಪವಾಗಿ ಉದಯಿಸುವವುಗಳೆ ಮುಂದೆ ತಿಳಿಸುವ ಸಂಜ್ಞಾನ ಆಜ್ಞಾನ ಮುಂತಾದವುಗಳು.

ಸಂಜ್ಞಾನ ಎಂದರೆ ಎಚ್ಚರವು. ಚೇತನವೆನಿಸುವುದು. ಆಜ್ಞಾನ ಎಂದರೆ ಅಪ್ಪಣೆ ಮಾಡುವುದು, ಆಳುವುದು. ವಿಜ್ಞಾನ ಎಂದರೆ ಕಲೆಯೆ ಮುಂತಾದದ್ದನ್ನು ತಿಳಿದಿರುವುದು. ಪ್ರಜ್ಞಾನ ಎಂದರೆ ಚೆನ್ನಾಗಿ ಅರಿಯುವಿಕೆ, ತಿಳಿಯುವಿಕೆ. ಮೇಧಾ ಎಂದರೆ ಗ್ರಂಥದ ವಿಚಾರವನ್ನು ನೆನಪಿನಲ್ಲಿ ಇಟ್ಟುಕೊಳ್ಳುವ ಶಕ್ತಿ. ದೃಷ್ಟಿ ಎಂದರೆ ಇಂದ್ರಿಯುಗಳ ಮೂಲಕವಾಗಿ ವಿಷಯುಗಳೆಲ್ಲವನ್ನೂ ಅರಿಯುವುದು. ಧೃತಿ ಎಂದರೆ ಧರಿಸುವುದು. 'ಧೃತಿಯಿಂದ ಶರೀರವನ್ನು ಧರಿಸಿರುತ್ತಾರೆ' ಎಂದಲ್ಲವೆ ಹೇಳುತ್ತಾರೆ. ಅಂದರೆ ದೇಹವು ಕುಸಿದು ಬಿದ್ದು ಹೋಗದಂತೆ ಎತ್ತಿ ಹಿಡಿಯುವುದು. ಮತಿ ಎಂದರೆ ಯೋಚಿಸುವುದು. ಮನಿಷಾ ಎಂದರೆ ಯೋಚಿಸುವುದರಲ್ಲಿ ಸ್ವಾತಂತ್ರ್ಯವು ಜೂತಿ ಎಂದರೆ ಚಿತ್ತವು, ರೋಗಾದಿಗಳಿಂದ ನರಳುತ್ತಿರುವುದು. ಸ್ಮೃತಿ ಎಂದರೆ ನೆನಪ್ಪು, ಸ್ಮರಿಸುವುದು. ಸಂಕಲ್ಪ ಎಂದರೆ ಬಿಳಪು ಕಪ್ಪು ಮುಂತಾದ ರೂಪಾದಿಗಳನ್ನು ಕಲ್ಪಿಸುವುದು. ಕ್ರತು ಎಂದರೆ ನಿಶ್ಚಯಮಾಡುವುದು. ಅಸು ಎಂದರೆ ಉಸಿರಾಡುವುದೇ ಮುಂತಾದ ಬದುಕಿರುವುದೆಂಬ ಕ್ರಿಯೆಗೆ ಕಾರಣವಾಗಿರುವ ವೃತ್ತಿ. ಕಾಮ ಎಂದರೆ ಎದುರಿಗಿಲ್ಲದ ವಿಷಯುವನ್ನು ಅಪೇಕ್ಷಿಸುವುದು, ಬಯಕೆ. ವಶ ಎಂದರೆ ಹೆಂಗಸಿನಲ್ಲಿ ಬೆರೆಯುವದೆ ಮುಂತಾದ್ದರ ಅಭಿಲಾಷೆ. ಅಂತಃಕರಣದ ಉಪಾಧಿಯಲ್ಲಿರುವ ಪ್ರಜ್ಞಾನ ರೂಪವಾದ ಜ್ಞಾತೃವಿಗೆ ಹೊರಗೂ ಒಳಗೂ ಇರುವ ಮೇಲಿನ ವಿಷಯುಗಳು ಪ್ರಜ್ಞಾನದ ಮಹಿಮೆಯಿಂದ ಉದಯಿಸುವುದರಿಂದ ಇವೆಲ್ಲಾ ಪ್ರಜ್ಞಾನದ ಹೆಸರುಗಳಾಗಿರುತ್ತವೆ. ಇವೆಲ್ಲಾ ಪ್ರಜ್ಞಾನದ ಮಹತ್ತಿನದವುಗಳಾಗಿವೆ.

ಇಲ್ಲಿ ಇನ್ನೊಂದು ವಿಚಾರವನ್ನು ನಾವು ತಿಳಿದುಕೊಳ್ಳುವುದು ಉತ್ತಮ. ಪರಬ್ರಹ್ಮನು ನೆತ್ತಿಯ ಚಿಪ್ಪಿನ ಮಾರ್ಗವಾಗಿ ಶುದ್ಧ ಸತ್ವಗುಣರೂಪವಾದ ಅಹಂ ಜ್ಞಾನರೂಪವಾದ ಪ್ರಜ್ಞಾನ ರೂಪದಲ್ಲಿ ಅಂತಃಕರಣದಲ್ಲಿ ನೆಲಸಿದನೆಂದು ಪ್ರಥಮದಲ್ಲಿ ತಿಳಿಸಿದೆ. ಭಗವದ್ಗೀತೆಯಲ್ಲಿ ತಿಳಿಸುವ ಕ್ಷೇತ್ರಜ್ಞನೂ ಐತರೋಪನಿಷತ್ತಿನಲ್ಲಿ ತಿಳಿಸುವ ಪ್ರಜ್ಞಾನವೂ ಪ್ರತ್ಯೇಕವಾದುದಲ್ಲ. ಎರಡೂ ಒಂದೇ. ಕ್ಷೇತ್ರ, ಕ್ಷೇತ್ರಜ್ಞ ಎಂಬ ವಿಚಾರದಲ್ಲಿ ಶ್ರೀ ಶಂಕರ ಭಗವತ್ಪಾದಾಚಾರ್ಯರವರು ಗೀತಾ ಭಾಷ್ಯದಲ್ಲಿ

**ಸಪ್ತಮೇ ಅಧ್ಯಾಯೇದ್ವೇಪ್ರಕೃತೀ ಸೂಚಿತೇ ಪರಮೇಶ್ವರಸ್ಯ।**
**ತ್ರಿಗುಣಾತ್ಮಿಕಾ ಅಷ್ಟ ಧಾಭಿನ್ನಾ ಅಪಾರಾ । ಸಂಸಾರಹೇತುತ್ವಾತ್।**
**ಪರಾಚ ಅನ್ಯಾಜೀವ ಭೂತಾ ಕ್ಷೇತ್ರಜ್ಞಲಕ್ಷಣಾ ಈಶ್ವರಾತ್ಮಿಕಾ–**
**ಯಾ ಭ್ಯಾಂ ಪಕೃತಿ ಭ್ಯಾಂ ಈಶ್ವರಃ ಜಗದುತ್ಪತ್ತಿಸ್ಥಿತಿಲಯ ಹೇತುತ್ವೆ**
**ಪ್ರತಿಪಾದ್ಯತೇ। ತತ್ರ ಕ್ಷೇತ್ರ ಕ್ಷೇತ್ರಜ್ಞ ಲಕ್ಷಣ ಪ್ರಕೃತಿದ್ವಯ**

**ನಿರೂಪಣ ದ್ವಾರೇಣ ತದ್ವತಃ ಈಶ್ವರಸ್ಯ ತತ್ವ ನಿರ್ಧಾರಣಾರ್ಥಂ ಕ್ಷೇತ್ರಾಧ್ಯಾಯಃಆರಭ್ಯತೇ ।**

ಅರ್ಥ॥ ಏಳನೇ ಅಧ್ಯಾಯದಲ್ಲಿ ಎಂಟು ವಿಧವಾಗಿ ಇರುವುದರಿಂದ ಕೀಳಾದ ಪ್ರಕೃತಿಯೊಂದು ಈಶ್ವರ ಸ್ವರೂಪವಾದ ಜೀವನಾಗಿರುವ ಕ್ಷೇತ್ರಜ್ಞನೆಂಬ ಉತ್ಕೃಷ್ಟವಾದ ಪರಾಪ್ರಕೃತಿಯೊಂದು ಹೀಗೆ ಈಶ್ವರನಿಗೆ ಎರಡು ಪ್ರಕೃತಿಗಳು ಸೂಚಿತವಾಗಿರುತ್ತವೆ. ಈ ಎರಡು ಪ್ರಕೃತಿಗಳಿಂದ ಈಶ್ವರನು ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣವಾಗುತ್ತಾನೆ. ಕ್ಷೇತ್ರ ಕ್ಷೇತ್ರಜ್ಞ ಎಂಬ ಪ್ರಕೃತಿಗಳನ್ನು ನಿರೂಪಣೆ ಮಾಡುವುದರ ಮೂಲಕ ಈಶ್ವರ ತತ್ವವನ್ನು ನಿರ್ಧರಿಸಲು ಕ್ಷೇತ್ರಾಧ್ಯಾಯವನ್ನು ಪ್ರಾರಂಭಿಸಿದೆ ಎಂದು ಹೇಳಿರುವರು.

ಕ್ಷೇತ್ರವನ್ನು ತಿಳಿಯುವನಾದುದರಿಂದ ಮತ್ತು ಪ್ರಕಾಶಪಡಿಸುವವನಾದುದರಿಂದ ಶುದ್ಧವಾದ ಅಹಂ ಜ್ಞಾನರೂಪವಾಗಿ ಕ್ಷೇತ್ರಜ್ಞನೆನಿಸುವನು. ಪ್ರಜ್ಞಾನವೇದರೂ ಇದೇ ತತ್ವದ್ದೆಂದು ಹಿಂದೆಯೆ ಬರೆದಿರುತ್ತದೆ. ಪರಬ್ರಹ್ಮವೆ ಪ್ರಜ್ಞಾನರೂಪದಲ್ಲಿ ದೇಹದಲ್ಲಿದೆ. ಈ ತತ್ವಕ್ಕನುಸಾರವಾಗಿ "ಕ್ಷೇತ್ರಜ್ಞಂ ಚಾಪಿ ಮಾಂವಿದ್ಧಿ ಸರ್ವಕ್ಷೇತ್ರೇಷು ಭಾರತ" ಅಂದರೆ ಎಲ್ಲಾ ಶರೀರಗಳಲ್ಲಿಯೂ ಇರುವ ಕ್ಷೇತ್ರಜ್ಞನ ನಾನೆಂಬುದಾಗಿ ಅಂದರೆ ಪರಮಾತ್ಮನೇ ಎಂದು ತಿಳಿ ಎಂದು ಹೇಳಿರುವನು.

**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂರವಿಃ ।**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥ 13—33**

ಎಲೈ ಅರ್ಜುನನೆ । ಹೇಗೆ ಒಬ್ಬನೇ ಸೂರ್ಯನು ಸಮಸ್ತಲೋಕಗಳನ್ನು ಪ್ರಕಾಶಿಸುವನೋ ಹಾಗೆಯೆ ಕ್ಷೇತ್ರಜ್ಞನು ಕ್ಷೇತ್ರವೆಲ್ಲವನ್ನು ಪ್ರಕಾಶಗೊಳಿಸುವನು. ಈ ಮೇಲಿನ ಗೀತಾವಾಕ್ಯಕ್ಕೆ ಅನುಸಾರವಾಗಿ ಆತ್ಮನು (ಪರಬ್ರಹ್ಮನು) ದೇಹವನ್ನು ಸೃಷ್ಟಿಸಿದ ನಂತರ ತಿಳಿಯುವವರು ಪ್ರಕಾಶ ಪಡಿಸುವವರು ಯಾರೂ ದೇಹದಲ್ಲಿ ಇಲ್ಲವೆಂದು ಯೋಚಿಸಿ ನೆತ್ತಿಯ ದ್ವಾರಾ ಪರಬ್ರಹ್ಮನು ದೇಹಕ್ಕೆ ಪ್ರವೇಶಿಸಿದನೆಂದು ಉಪನಿಷತ್ತಿನಲ್ಲಿ ತಿಳಿಸಿದೆ. ಆದುದರಿಂದ ಪ್ರಜ್ಞಾನವೆಂದರೆ ಪರಿಶುದ್ಧವಾದ ಅಹಂ ಜ್ಞಾನವು ದೇಹವನ್ನೆಲ್ಲವನ್ನೂ ಪ್ರಕಾಶ ಪಡಿಸುತ್ತದೆ. ಆದುದರಿಂದ ಕ್ಷೇತ್ರಜ್ಞ ಪ್ರಜ್ಞಾನ ಎರಡೂ ಒಂದೆ. ಕ್ಷೇತ್ರಜ್ಞ ಪ್ರಜ್ಞಾನ ಗಳೆರಡರ ರೂಪವೂ ಅಹಂ ಜ್ಞಾನವಾಗಿದೆ.

ಪ್ರಜ್ಞಾನದ ಮಹಿಮೆಯಾಗಿರುವ ಸಂಜ್ಞಾನ ವಿಜ್ಞಾನ ಮುಂತಾದ ವಿಷಯುಗಳ ಜ್ಞಾನಗಳನ್ನು ಅಂತಃಕರಣವು ಹೊರಸೂಸುವುದೆಂದು ಮೇಲೆ ತಿಳಿಸಿತಷ್ಟೆ. ಅಂತಃಕರಣವು ವೃತ್ತಿರೂಪವಾಗಿ ವಿಜ್ಞಾನಮಯ ಕೋಶಕ್ಕೆ ಬಂದಾಗ ಮೇಲಿನ ಸಂಜ್ಞಾನ ವಿಜ್ಞಾನ ಮುಂತಾದ ವಿಷಯುಗಳ ಜ್ಞಾನವು ವಿಕಸಿತವಾಗುವುವು. ಈ ರೀತಿ ವಿಕಸಿತವಾಗಲು ಅಂತಃಕರಣದ ಪರಮಾತ್ಮನ ಪ್ರತಿಫಲಿತ ಚೈತನ್ಯವಾದ ಜೀವಾತ್ಮನ ಪ್ರಕಾಶವು ಅಂತಃಕರಣದ ವೃತ್ತಿಗೆ ಅತ್ಯವಶ್ಯಕವಾಗಿ ಬೇಕು. ಆದುದರಿಂದ ಜೀವಾತ್ಮನು ಈ ವೃತ್ತಿಗಳನ್ನು ಪ್ರಕಾಶಪಡಿಸುತ್ತಾನೆ. ಅಂತಃಕರಣಕ್ಕೆ ಅವಿದ್ಯಾಉಪಾಧಿಯಾದ ತಮೋಗುಣವು ವ್ಯಾಪಕವಾದಲ್ಲಿ ಅಂತಃಕರಣದ ವೃತ್ತಿಯು ಮೊದ್ದುಸ್ವಭಾವ ಅಥವಾ ಮಾಂದ್ಯವಾಗುವುದರಿಂದ ಪ್ರಜ್ಞಾನದ ಮಹತ್ತಿನ ಸಂಜ್ಞಾನ ಮುಂತಾದುವುಗಳು ಪ್ರಫುಲ್ಲತೆ ಇಲ್ಲದಂತಾಗುವುದು. ಹೀಗೆಯೇ ರಜೋಗುಣವು ವ್ಯಾಪಕವಾದಲ್ಲಿಯೂ ಅಂತಃಕರಣದ ವೃತ್ತಿಯು ವಿಕ್ಷೇಪ ಮತ್ತು ಉಗ್ರಸ್ವಭಾವ ವಾಗುವುದರಿಂದ ಪ್ರಜ್ಞಾನಕ್ಕೆ ಪ್ರಫುಲ್ಲತೆ ಇಲ್ಲದಂತಾಗುವುದು. ಮಲಿನ ಸತ್ವಗುಣದ ವ್ಯಾಪ್ತಿ ಕಾಲದಲ್ಲಿ ಮಾತ್ರ ಕೊಂಚ ಪ್ರಫುಲ್ಲತೆ ಇರುವುದು. ಆದ್ದರಿಂದ ಮನುಷ್ಯನಲ್ಲಿ ಅವಿದ್ಯಾ ಉಪಾಧಿ (ಬಂಧನ) ಇರುವವರಿಗೆ ಪ್ರಜ್ಞಾನಕ್ಕೆ ಪ್ರಫುಲ್ಲತೆ ಇರುವುದಿಲ್ಲ.

## ಜೀವನ್ಮುಕ್ತನ ವಿಚಾರ

ಅವಿದ್ಯಾ ಬಂಧನ ಇರುವವರೆಗೆ ಪ್ರಜ್ಞಾನಕ್ಕೆ ಪ್ರಫುಲ್ಲತೆ ಇರುವುದಿಲ್ಲವೆಂದು ಮೇಲೆ ತಿಳಿಸಿತಷ್ಟೆ. ಅವಿದ್ಯಾ ಬಂಧನ ನಿವೃತ್ತಿಯಾಗಿ ಯಾವ ಕಾಲದಲ್ಲಿ ಪ್ರಜ್ಞಾನಕ್ಕೆ ಪೂರ್ಣ ಪ್ರಫುಲ್ಲತೆ ಬರುವುದೆಂಬ ವಿಚಾರವನ್ನು ತಿಳಿದುಕೊಳ್ಳೋಣ. ನಾಲಕ್ಕು ವೇದಗಳ ಮಹಾ ವಾಕ್ಯಗಳ ತತ್ವಾರ್ಥದಲ್ಲಿ ಪ್ರಜ್ಞಾನವು ಪರಬ್ರಹ್ಮದಲ್ಲಿ ಐಕ್ಯವಾಗಿ ಪರಮಾತ್ಮ ಸಾಕ್ಷಾತ್ಕಾರ ರೂಪವಾದ ಸಮಾಧಿಯನ್ನು ಅಧಿಕಾರಿಯು ಹೊಂದಿದನೆಂಬ ವಿಚಾರವು ಬಂದಿರುವುದಷ್ಟೆ. ಮನುಷ್ಯನು ಬದುಕಿರುವಾಗಲೇ ಪರಮಾತ್ಮ ಸಾಕ್ಷಾತ್ಕಾರದ ಸಮಾಧಿ ಸ್ಥಿತಿಯನ್ನು ಹೊಂದಿ ಪುನಃ ಬಹಿರ್ಮುಖಿಯಾಗುತ್ತಾನೆ. ಕಾರಣವೇನೆಂದರೆ ಮನುಷ್ಯನಿಗೆ ಎಷ್ಟು ವರ್ಷಕಾಲ ಆಯುಸ್ಸು ಇರುವುದೋ ಅಲ್ಲಿಯವರೆಗೆ ಅವನು ಪ್ರಾರಬ್ಧ ಕರ್ಮವನ್ನು ಅನುಭವಿಸಲು ಜೀವಂತನಾಗಿರಲೇ ಬೇಕು. ಜೀವಂತನಾಗಿರುವವರೆಗೆ ಪ್ರಾರಬ್ಧ ಕರ್ಮವನ್ನು ಅನುಸರಿಸಿ ಬಹಿರ್ವ್ಯಾಪಾರದಲ್ಲೇ ನಿರತನಾಗಿರಬಹುದು. ಅಥವಾ ಬ್ರಹ್ಮಾಮೃತದ ಆನಂದರಸವನ್ನು ಅನುಭವಿಸಲು ಆಗ್ಗಾಗ್ಗೆ ಅಲ್ಪಕಾಲವೊ, ದೀರ್ಘಕಾಲವೊ ಬಹಿರ್ಮುಖದ ಜ್ಞಾನವನ್ನು ಮರೆತು ಅಂತರ್ಮುಖಕ್ಕೆ ಪ್ರವೇಶಿಸಿ ಪ್ರಜ್ಞಾನವೆಂದರೆ ಅಖಂಡಾಕಾರವಾದ ನಾನು ಎಂಬ ರೂಪಿನಲ್ಲಿ ಆನಂದ

ಮಗ್ನತೆಯಲ್ಲಿ ಮುಳುಗಿರುತ್ತಾನೆ. ಈ ತತ್ವಕ್ಕೆ ಮಣ್ಡಲ ಬ್ರಾಹ್ಮಣೋಪನಿಷತ್ತಿನಲ್ಲಿ "ಚಿರ ಸಮಾಧಿ ಜನಿತ ಬ್ರಹ್ಮಾಮೃತ ಪಾನ ಪರಾಯಣೋ ಅಸೌ ಸನ್ಯಾಸೀ ಪರಮ ಹಂಸ ಅವಧೂತೋ ಭವತಿ" ಅಂದರೆ ಸಮಾಧಿ ಸಿದ್ಧಿಯಿಂದ ಉತ್ಪನ್ನವಾಗುವ ಬ್ರಹ್ಮಾಮೃತವನ್ನು ಪಾನ ಮಾಡುವುದರಲ್ಲಿ ಯಾವನು ನಿಸ್ಸೀಮನೊ ಅವನೇ ಸನ್ಯಾಸಿ ಎಂದು ಹೇಳಿದೆ. ಪೈಂಗಲೋಪನಿಷತ್ತಿನಲ್ಲಿ

**ಮನಸೊ ಹ್ಯ ನ್ಮಿನೀಭಾವೇ ದ್ವೈತಂನೈವೋಪಲಭ್ಯತೆ।**

**ಯದಾಯಾತ್ಯುನ್ಮೀಭಾವ ಸ್ತದಾ ತತ್ಪರಮಂ ಪದಮ್॥**

ಮನಸ್ಸಿಗೆ ಉನ್ಮನೀ ಭಾವ ಉಂಟಾಗಲು ಎರಡನೆಯುದರ ಜ್ಞಾನವೇ ಇರುವು ದಿಲ್ಲ. ತಾನೇ ತಾನಾಗಿರುತ್ತಾನೆ. ಇದೇ ಪರಮಪದ ಎಂದು ಹೇಳಿದೆ. ಶ್ರೀ ಶಂಕರ ಭಗವತ್ಪಾದಾಚಾರ್ಯರವರು ವಿವೇಕ ಚೂಡಾಮಣಿ ೪೩೬ ನೇ ಶ್ಲೋಕದಲ್ಲಿ

**ಬ್ರಹ್ಮಾನನ್ದರಸಾಸ್ವಾದಾಸಕ್ತ ಚಿತ್ತತಯಾ ಯತೇಃ।**

**ಅನ್ತರ್ಬಹಿರವಿಜ್ಞಾನಂ ಜೀವನ್ಮುಕ್ತಸ್ಯಲಕ್ಷಣಂ॥**

ಯಾವ ವಿರಕ್ತನ ಚಿತ್ತವು ಬ್ರಹ್ಮಾನನ್ದರಸಾನುಭವದಲ್ಲಿಯೇ ಮಗ್ನನಾಗಿ ಅನ್ತರಂಗ ಬಹಿರಂಗ ವ್ಯಾಪಾರಗಳನ್ನು ಅರಿತುಕೊಳ್ಳುವುದಿಲ್ಲವೋ ಅವನು ಜೀವನ್ಮುಕ್ತನು ಎಂದು ಹೇಳಿದೆ. ಅಲ್ಲದೆ ಶ್ರೀ ಶಂಕರ ಭಗವತ್ಪಾದಾಚಾರ್ಯರವರು ಯೋಗತಾರಾವಳಿ ಯಲ್ಲಿ

**ನೇತ್ರೇಯಯೋರುನ್ಮೇಷ ನಿಮೇಷ ಶೂನ್ಯೇ।**
**ವಾಯುರ್ಯಯಾ ವರ್ಜಿತರೇಚ ಪೂರಃ॥**
**ಮನಶ್ಚ ಸಂಕಲ್ಪ ವಿಕಲ್ಪ ಶೂನ್ಯಂ।**
**ಮನೋನ್ಮನೀಸಾಮಯಿಸನ್ನಿಧತ್ತಾಂ॥**

ಜ್ಞಾನಯೋಗಾಭ್ಯಾಸದಿಂದ ಯಾವ ಸಾಧಕರು ಕಣ್ಣಿನ ನಿಮಿಷೋನ್ಮೇಷಗಳಿಲ್ಲ ದವರಾಗಿ ಅಂದರೆ ಅರೆಗಣ್ಣುಳ್ಳವರಾಗಿ ಉಚ್ಛ್ವಾಸ ನಿಶ್ವಾಸಗಳಿಲ್ಲದೆ ಸಂಕಲ್ಪ ವಿಕಲ

ಗಳಿಲ್ಲದ ಮನಸ್ಸುಳ್ಳವರಾಗಿ ಪ್ರಜ್ಞಾನ ಮಾತ್ರ ಉಳಿದುಕೊಂಡು ಆನಂದ ಮಗ್ನತೆ ಯಲ್ಲಿರುವ ಮನೋನ್ಮನ್ಯವಸ್ಥೆಯನ್ನು ಅನುಭವಿಸುವರೊ ಅಂತಹ ಮನೋನ್ಮನ್ಯವ ಸ್ಥೆಯು ನನ್ನಲ್ಲಿ ಸ್ಥಿರವಾಗಿ ನೆಲಸಲಿ. ಎಂದು ಶ್ರೀ ಶಂಕರ ಭಗವತ್ಪಾದರೇ ಹೇಳಿ ರುವಾಗ ಶುದ್ಧವಾದ ಪ್ರಜ್ಞಾನದ ಮಹತ್ತು ಎಂತಹುದೆಂಬುದನ್ನು ಸರ್ವರೂ ಯೋಚಿಸಲಿ. ಪ್ರಜ್ಞಾನವು ಅವಿದ್ಯಾಉಪಾಧಿಯ ನಿರ್ಬಂಧದಲ್ಲಿದ್ದಾಗ ಅದರ ಪ್ರಕಾ ಶಕ್ಕೆ ಅವಕಾಶವೇ ಇರಲಿಲ್ಲ. ಜೀವತ್ಮುಕ್ತನ ಸೋಪಾನದಲ್ಲಿ ಪರಿಶುದ್ಧವಾದ ಪ್ರಫುಲ್ಲತೆ ಯು ಇರುವುದರಿಂದ ಈ ಸೋಪಾನವು ಈಶ್ವರ ಸೋಪಾನವಾಗಿರುವುದು. ಪ್ರಜ್ಞಾ ನವು ಇಲ್ಲಿ ಈಶ್ವರೀಶಕ್ತಿಯೆನಿಸಿ ಈಶ್ವರನಿಗೆ ಪತ್ನಿಯಾಗಿರುವಳು. ಇದನ್ನು ಐತರೇ ಯೋಪನಿಷತ್ತಿನ ಭಾಷ್ಯದಲ್ಲಿ ಶ್ರೀ ಶಂಕರ ಭಗವತ್ಪಾದಾರ್ಯರವರು ಬರೆದಿರು ವರು. "ತದತ್ಯನ್ತ ವಿಶುದ್ಧ ಪ್ರಜ್ಞೋಪಾಧಿ ಸಮ್ಬನ್ಧೇನ ಸರ್ವಜ್ಞಮ್ ಈಶ್ವರ ಸಂಜ್ಞಂ ಭವತೀ" ಅಂದರೆ ಪರಬ್ರಹ್ಮಚೈತನ್ಯವೆ ಅತ್ಯಂತ ಶುದ್ಧವಾದ ಪ್ರಜ್ಞೆ ಎಂಬ ಉಪಾಧಿಯ ಸಂಭಂಧದಿಂದ ಸರ್ವಜ್ಞವಾಗಿ ಈಶ್ವರನೆಂಬ ಹೆಸರನ್ನು ಪಡೆಯುವುದಾ ಗುವುವು. ಅತ್ಯಂತ ಪರಿಶುದ್ಧವಾದ ಪ್ರಜ್ಞಾನವು 'ನಾನು' ಎಂಬ ಅಖಂಡಾಕಾರ ಜ್ಞಾನರೂಪ ದಿಂದ ಸರ್ವವ್ಯಾಪಿಯಾಗಿರುವುದರಿಂದ ಸರ್ವಜ್ಞ ಎನಿಸಿಕೊಳ್ಳುವುದು. ಇಂತಹ ಸರ್ವಜ್ಞತ್ವದ ಶಕ್ತಿಯೊಡಗೂಡಿರುವುದರಿಂದ ಈಶ್ವರನು ಸರ್ವಜ್ಞನೆನಿಸಿ ಕೊಂಡಿರುವನು.

ಇಂತಹ ಪ್ರಜ್ಞಾನರೂಪವಾದ ಅಹಂ ಜ್ಞಾನವೆ ಶುದ್ಧಸತ್ವ ಪ್ರಕೃತಿಯೆಂದೂ, ವಿದ್ಯೆಯೆಂದೂ, ಶುದ್ಧಸತ್ವ ಪ್ರಧಾನ ಮಾಯೆಯೆಂದೂ, ಶುದ್ಧಸತ್ವಗುಣವೆಂದೂ ಕರೆಯಲ್ಪಡುವುದು. ಶುದ್ಧಸತ್ವ ಗುಣದ ಮಹತ್ತು ಎಂತಹುದೆಂಬುದಕ್ಕೆ ಶ್ರೀ ಶಂಕರ ಭಗವತ್ಪಾದರು ಸ್ವಾತ್ಮಾನುಭೂತಿಃ ಪರಮಪ್ರಶಾಂತಿಃ ತೃಪ್ತಿಃ ಪ್ರಹರ್ಷಃ ಪರಮಾ ತ್ಮನಿಷ್ಠಾಯಯಾ ಸದಾನಂದ ರಸಂ ಸಮೃಚ್ಛತಿ ಎಂದು ಹೇಳಿರುವ ಶ್ಲೋಕವನ್ನು ಹಿಂದೆಯೇ ಬರೆದಿದೆ. ಐತರೇಯೋಪನಿಷತ್ತಿನಲ್ಲಿರುವ ಪ್ರಜ್ಞಾನ ಸ್ವರೂಪವಾಗಿರುವ ಸಂಜ್ಞಾನ, ವಿಜ್ಞಾನ, ಆಜ್ಞಾನ, ಮೇಧಾ, ದೃಷ್ಟಿ, ಧೃತಿ ಮುಂತಾದುವುಗಳೆಲ್ಲಾ ಸರ್ವಜ್ಞತ್ವದ ಈ ಈಶ್ವರ ಸ್ಥಿತಿಯಲ್ಲಿ ಪ್ರಫುಲ್ಲತೆಯಿಂದ ಮಹತ್ತಾದ ಶಕ್ತಿಗಳ ಸ್ವರೂಪದಲ್ಲಿರುವುವು. ಜೀವತ್ವದ ಸೋಪಾನದಲ್ಲಿ ಅವಿದ್ಯಾ ಸಂಪರ್ಕದಿಂದ ಪ್ರಫುಲ್ಲತೆಗೆ ಅವಕಾಶವಿಲ್ಲದೆ ಇರುವುದರಿಂದ ಸಂಜ್ಞಾನ, ವಿಜ್ಞಾನ ಮುಂತಾದವುಗಳು ಕಿಂಚಜ್ಞತ್ವವಾಗಿ ಅಲ್ಪಶಕ್ತಿಗಳಾಗಿರುತ್ತವೆ. ಪರಮಾತ್ಮನ ಸೃಷ್ಟಿಯಲ್ಲಿ ಮನುಷ್ಯ ನಿಗೆ ಮಾತ್ರ ಅತುಲಿತಾನಂದವಾದ ಮೋಕ್ಷವನ್ನು ಹೊಂದಲು ಅರ್ಹತೆಯನ್ನು ಕೊಟ್ಟಿರುವವನಲ್ಲದೆ ಇತರ ಯಾವ ಪ್ರಾಣಿಗಳಿಗೂ ಕೊನೆಗೆ ದೇವತೆಗಳಿಗೂ ಸಹ ಈ ಅರ್ಹತೆಯನ್ನು ಕೊಟ್ಟಿಲ್ಲ. ಮನುಷ್ಯನು ಹಿಂದೆ ತಿಳಿಸಿರುವಂತೆ ಸಾಮವೇದ,

ಯಜುರ್ವೇದ, ಋಗ್ವೇದದ ತತ್ವಗಳಿಂದ ಪಡೆಯು ಬಹುದಾದ ಪ್ರಜ್ಞಾನಂ ಬ್ರಹ್ಮರೂಪವಾದ ಪರಮಾತ್ಮ ಸಾಕ್ಷಾತ್ಕಾರವನ್ನು ಪಡೆದು ಅನಂತರ ಜೀವನ್ಮುಕ್ತನ ಸ್ಥಿತಿಯಲ್ಲಿ ಪ್ರಜ್ಞಾನದ ಮಹಿಮೆಯಾದ ಈಶ್ವರ ಸೋಪಾನದ ಆನಂದಾಮೃತದಲ್ಲೂ ಮಗ್ನವಾಗಿ ದೇಹವಿರುವವರೆಗೆ ಕಾಲಕಳೆಯಲೆಂಬ ಕರುಣೆಯಿಂದಲೇ ಪರಮಾತ್ಮನು ಈ ಈಶ್ವರ ಸೋಪಾನವನ್ನು ಮನುಷ್ಯನ ದೇಹದಲ್ಲಿ ಇಟ್ಟಿರುತ್ತಾನೆ ಶ್ರೀ ಕೃಷ್ಣನು ಉತ್ತರಗೀತೆಯಲ್ಲಿ ಅರ್ಜುನನಿಗೆ ಹೇಳಿರುವುದೇನಂದರೆ

ಆಹಾರನಿದ್ರಾ ಭಯಮೈಥುನಂ ಚ ।
ಸಾಮಾನ್ಯ ಮೇ ತತ್ಪ ಶುಭಿರ್ನರಾಣಾಂ ॥
ಜ್ಞಾನಂ ನರಾಣಾಮಧಿಕೋ ವಿಶೇಷಃ ।
ಜ್ಞಾನೇನ ವಿಹೀನಃ ಪಶು ಭಿಸ್ಸಮಾನಃ ॥

ಆಹಾರ, ನಿದ್ರೆ, ಭಯ, ಮೈಥುನ ಮುಂತಾದುವುಗಳು ಮನಷ್ಯನಿಗೂ ಪಶ್ವಾದಿಗಳಿಗೂ ಸಮಾನವಾಗಿರುವುವು. ಆತ್ಮಜ್ಞಾನವೊಂದು ಪಶ್ವಾದಿಗಳಿಗಿಂತ ಮನುಷ್ಯನಿಗೆ ಹೆಚ್ಚಿನದಾಗಿರುವುದು. ಆತ್ಮಜ್ಞಾನ ಇಲ್ಲದವನು ಪಶು ಸಮಾನನೆಂದು ಹೇಳಿರುತ್ತಾನೆ. ಆತ್ಮಜ್ಞಾನವೆನಿಸುವುದೆ ಪ್ರಜ್ಞಾನ. ವಿಜ್ಞಾನವೆಂದರೆ ಪ್ರಾಪಂಚಿಕದ ಕಲೆಯೆ ಮುಂತಾದವುಗಳ ಜ್ಞಾನ. ಪ್ರಪಂಚದ ಎಂತಹ ಕಲೆಯ ಜ್ಞಾನವಾದರೂ ಪ್ರಾಪಂಚಿಕದ್ದೇ ಆದುದರಿಂದ ಇದು ಪ್ರಜ್ಞಾನವಾಗಲಾರದು. ನರ ಎಂದರೆ ಜ್ಞಾನ. ಮನುಷ್ಯ ಎಂದರೂ ಜ್ಞಾನ. ಆದುದರಿಂದ ಪ್ರಜ್ಞಾನವನ್ನು ಹೊಂದಿದವನೆ ನಿಜವಾದ ನರ ಮನುಷ್ಯ ಎನಿಸಿಕೊಳ್ಳುತ್ತಾನೆ. ನಾವು ನರನಾರಾಯಣರಾಗಬೇಕು. ಈಶ್ವರ ಸೋಪಾನಕ್ಕೆ ನಾವು ಹತ್ತಿದರೆ ನರತ್ವ ಬರುವುದು. ಶ್ರೀ ಕೃಷ್ಣನೇ ನಾರಾಯಣ. ಅರ್ಜುನನೇ ನರ. ಇವರಿಬ್ಬರೂ ಸೇರಿದಾಗ ನರನಾರಾಯಣರೆನಿಸುವರು. ಶ್ರೀಕೃಷ್ಣನು ಅರ್ಜುನನನ್ನು ಕುರಿತು ಅನೇಕ ಸಾರಿ ನಾನೆ ನೀನು ಎಂದು ಹೇಳಿರುವನು. ಆದುದರಿಂದ ಮನುಷ್ಯನು ಪ್ರಜ್ಞಾನರೂಪವಾದ ಈಶ್ವರ ಸೋಪಾನದ ಆನಂದವನ್ನು ಜೀವನ್ಮುಕ್ತಸ್ಥಿತಿಯಲ್ಲಿ ಅನುಭವಿಸಬೇಕು.

ಈ ರೀತಿಯಾಗಿ ಜೀವನ್ಮುಕ್ತ ಸ್ಥಿತಿಯನ್ನು ಅನುಭವಿಸುತ್ತಿದ್ದ ಕಾಲದಲ್ಲಿ ಯಾವಾಗ ದೇಹಕ್ಕೆ ಮರಣವುಂಟಾಗುವುದೊ ಆ ಕಾಲದಲ್ಲಿ ಪುನರಾವರ್ತಿ ರಹಿತವಾದ ಅಂದರೆ ಪುನಃ ಹುಟ್ಟು ಸಾವುಗಳಿಲ್ಲದೆ ಸರ್ವ ವ್ಯಾಪಿಯಾದ ಪರಮಾತ್ಮನಲ್ಲಿ ಸೇರಿ ಹೋಗುವ ವಿದೇಹ ಕೈವಲ್ಯವು ಪ್ರಾಪ್ತವಾಗುವುದು. ವಿದೇಹ ಮುಕ್ತಿಯ ವಿಚಾರ ಕ ಮುಂಡಕೋಪನಿಷತ್ತಿನಲ್ಲಿ

**ಗತಾಃ ಕಲಾಃ ಪಂಚದಶ ಪ್ರತಿಷ್ಠಾ ದೇವಾಶ್ಚ ಸರ್ವೇ ಪ್ರತಿದೇವತಾಸು ।**

**ಕರ್ಮಾಣಿ ವಿಜ್ಞಾನ ಮಯಶ್ಚ ಆತ್ಮಪರೇವ್ಯಯೇ ಸರ್ವಏಕೀ ಭವನ್ತಿ ॥**

ತಾತ್ಪರ್ಯ ॥ ವಿದೇಹ ಮುಕ್ತಿಯಲ್ಲಿ ದೇಹಾರಂಭಕ್ಕೆ ಕಾರಣವಾಗಿದ್ದ ಕಲೆಗಳು ಪರಾಶಕ್ತಿಯಲ್ಲಿ ಲಯವನ್ನು ಹೊಂದುವುವು. ಇಂದ್ರಿಯಗಳು ಪಂಚಪ್ರಾಣ ಶಕ್ತಿಗಳು ತಮ್ಮ ತಮ್ಮ ಮೂಲಕಾರಣವಾದ ಬ್ರಹ್ಮಾಂಡದ ದೇವತಾ ಶಕ್ತಿಗಳಲ್ಲಿ ಸೇರಿ ಹೋಗುತ್ತವೆ. ಎಲ್ಲಾ ಕರ್ಮಗಳೂ ಭಸ್ಮವಾಗುವುವು. ಪ್ರಜ್ಞಾನರೂಪವಾದ ಅಹಂ ಜ್ಞಾನವು ತನ್ನ ನಿಜವಾದ ಪರಮಾತ್ಮನಾಗುವುದು. ಪ್ರತಿಫಲಿತ ಚೈತನ್ಯನಾದ ಜೀವಾತ್ಮನು ಸ್ವಯಂ ಪ್ರಕಾಶವಾದ ಪರಮಾತ್ಮ ನಾಗುವನು.

## ಐತರೇಯೋಪನಿಷತ್ತಿನ ೨ನೇ ಅಧ್ಯಾಯ ೪ನೇ ಮಂತ್ರದಲ್ಲಿ

೬.

**ಸಏಷಬ್ರಹ್ಮಏಷಇನ್ದ್ರಏಷ. ಪ್ರಜಾಪತಿರೇತೇ ಸರ್ವೇ**
**ದೇವಾ ಇಮಾನಿಚ ಪಂಚ ಮಹಾಭೂತಾನಿ ಪೃಥಿವೀ ವಾಯುರಾಕಾಶ**
**ಆಪೋಜ್ಯೋತಿಂಷೀತ್ಯೇತಾನೀಮಾನಿ ಚ ಕ್ಷುದ್ರಮಿಶ್ರಾಣೀವ ।**
**ಬೀಜಾನೀತರಾಣೆ ಚೇತರಾಣೆ ಚಾಣ್ಡಜಾನಿ ಚ ಜಾರಾಯು ಜಾನಿ ಚ**
**ಸ್ವೇದಜಾನಿ ಚೋದ್ಭಿಜ್ಜಾನಿ ಚಾಶ್ವಾಗಾವಃ ಪುರುಷಾ ಹಸ್ತಿನೋ**
**ಯತ್ಕಿಂಚೇದಂ ಪ್ರಾಣಿ ಜಙ್ಗಮಂ ಚ. ಪತತ್ರಿಚ ಯಚ್ಚಸ್ಥಾವರಂ ।**
**ಸರ್ವಂ ತತ್ ಪ್ರಜ್ಞಾನೇತ್ರಂ ಪ್ರಜ್ಞಾನೇ ಪ್ರತಿಷ್ಠಿತಂ ಪ್ರಜ್ಞಾನೇತ್ರೋ**
**ಲೋಕಃ ಪ್ರಜ್ಞಾಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ ॥ 3 ॥**

ಈತನೇ ಬ್ರಹ್ಮನು, ಈತನೇ ಇಂದ್ರನು, ಈತನೇ ಪ್ರಜಾಪತಿ, ಈ ದೇವತೆಗಳೆಲ್ಲರೂ ಈತನೇ, ಮತ್ತು ಪೃಥಿವೀ, ವಾಯು, ಆಕಾಶ, ಅಪ್ಪು, ಜ್ಯೋತಿ ಎಂಬೀ ಪಂಚಮಹಾಭೂತಗಳೂ ಮತ್ತು ಕ್ಷುದ್ರ ಮಿಶ್ರಗಳಾಗಿರುವ ಈ ಬೇರೆಬೇರೆಯ ಬೀಜಗಳು ಅಂದರೆ ಅಂಡಜಗಳು, ಜಾರಜಗಳು, ಸ್ವೇದಜಗಳು, ಉದ್ಭಿಜ್ಜಗಳು, ಕುದುರೆ

ಗಳು, ಎತ್ತುಗಳು ಮನುಷ್ಯರು, ಆನೆಗಳು, ಜಂಗಮವೂ ಪ್ರಕೃತಿಯೂ ಈ ಪ್ರಾಣಿ ಎಂಬುದೆಲ್ಲ ಯಾವುದೋ ಮತ್ತು ಸ್ಥಾವರವಾದದ್ದು ಯವುದೋ ಅವೆಲ್ಲವೂ ಪ್ರಜ್ಞಾನೇತ್ರವು, ಪ್ರಜ್ಞಾನದಲ್ಲಿ ನಿಂತಿರುವುದು, ಲೋಕವು ಪ್ರಜ್ಞಾನೇತ್ರವು, ಪ್ರಜ್ಞೆಯೇ ಆಶ್ರಯ, ಪ್ರಜ್ಞಾನವು ಬ್ರಹ್ಮವು.

'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಬೇರೊಂದು ಶ್ರುತಿ ವಾಕ್ಯಕ್ಕೆ ಅನುಸಾರವಾಗಿ ಮೇಲಿನ ಐತರೇಯೋಪನಿಷತ್ತಿನಲ್ಲಿ ತಿಳಿಸಿರುವ ಸರ್ವವೂ ಪರಬ್ರಹ್ಮವೆಂದು ಹೇಳಿರುವುದು ತಪ್ಪಲ್ಲ. ಆದರೆ ತತ್ವಗಳನ್ನು ವಿಂಗಡಿಸಿ ತಿಳಿದುಕೊಳ್ಳದೆ ಹೋದರೆ ತೊಡಕುಂಟಾಗುತ್ತದೆ. ಆದುದರಿಂದ ಪರಾಶಕ್ತಿ ಮತ್ತು ಇದರ ವಿಂಗಡಣೆಗಳಾದ ಸತ್ವರಜಸ್ತಮೋ ಗುಣಗಳ ಮೂಲಕ ತತ್ವಗಳನ್ನು ಚೆನ್ನಾಗಿ ತಿಳಿಯಲು ಅನುಕೂಲವಿದೆ. ಪ್ರಾಣನಾಗಿರುವ ಪರಬ್ರಹ್ಮವು ಶ್ರೇಷ್ಠವಲ್ಲ. ಪ್ರಜ್ಞಾನರೂಪವಾಗಿರುವ ಪರಬ್ರಹ್ಮವು ಶ್ರೇಷ್ಠವೆಂದು ಈ ಉಪನಿಷತ್ತಿನಲ್ಲಿ ತಿಳಿಸಿರುವುದು ಅಷ್ಟು ಸೂಕ್ತವಾಗಿ ಕಾಣುವುದಿಲ್ಲ. ಪರಬ್ರಹ್ಮನಲ್ಲಿ ಶ್ರೇಷ್ಠತ್ವ ಕನಿಷ್ಠತ್ವ ಇರುವುದಿಲ್ಲ. ಆದುದರಿಂದ ಈ ತತ್ವವನ್ನು ಚೆನ್ನಾಗಿ ತಿಳಿಯಲು ಪರಾಶಕ್ತಿಯ ಕ್ರಿಯಾಶಕ್ತಿಯೆ ಅಂದರೆ ಅಃ ವಿಸರ್ಗಾಕ್ಷರದ ತತ್ವವೆ ಪ್ರಾಣವೆನಿಸಿಯೂ ಮತ್ತು ವಿಸರ್ಗವೂ ಅನುಸ್ವಾರವು ಸೇರಿದ ಪರಾಶಕ್ತಿಯ ಜ್ಞಾನಶಕ್ತಿಯೆ ಪ್ರಜ್ಞಾನ ರೂಪವಾದ ಅಹಂವೆನಿಸಿಯೂ ಇರುವುದೆಂದು ಹಿಂದೆ ತಿಳಿಸಿದೆ. ಪ್ರಜ್ಞಾನವೇ ಈಶ್ವರೀ ಎನಿಸಿರುವಳು. ಈ ಈಶ್ವರೀ ಜೊತೆಯಲ್ಲಿವ ಪರಬ್ರಹ್ಮನ ಪ್ರತಿಫಲಿತ ಚೈತನ್ಯವೇ ಈಶ್ವರನಾಗಿರುವನು. ಪ್ರಜ್ಞಾನವು ಶುದ್ಧ ಸತ್ವಗುಣದ ಶಕ್ತಿಯಾಗಿದೆ. ಈ ಶಕ್ತಿಯು ತನ್ನಲಿ ಅಡಗಿಸಿಕೊಂಡಿದ್ದ ಮಲಿನ ಸತ್ವಗುಣ, ರಜೋಗುಣ, ತಮೋಗುಣಗಳ ಶಕ್ತಿಗಳನ್ನು ಹೊರಗೆಡವಿ ಇವರಿಂದ ಪಂಚ ಭೂತಗಳೂ, ಜಂಗಮ ರೂಪವಾದ ಪ್ರಾಣಿಗಳು ಮತ್ತು ದೇವತೆಗಳು ಮುಂತಾದ ಸಕಲವನ್ನೂ ಸೃಷ್ಟಿ ಮಾಡಿಸಿತು. ‹ಈಕ್ಷಣಾದಿಪ್ರವೇಶಾಂತಾ ಸೃಷ್ಟಿರೀಶೇನ ಕಲ್ಪಿತಾ' ಎಂಬ ಶ್ರುತಿ ವಚನಕ್ಕೆ ಅನುಸಾರವಾಗಿ ಈಶ್ವರ ಈಶ್ವರಿಯರ ಈಕ್ಷಣವೆ ಮೇಲೆ ಉಪನಿಷತ್ತಿನಲ್ಲಿ ತಿಳಿಸುವ ಪ್ರಜ್ಞಾನೇತ್ರದ ತತ್ವವಾಗಿರುವುದು. ನೇತ್ರವೆಂದರೆ ‹ನೀಯತೇ ಅನೇನೇ ತಿ ನೇತ್ರಂ' ಎಂದು ಭಾಷ್ಯದಲ್ಲಿ ಬರೆದಿದೆ. ಅಂದರೆ ಮಲಿನ ಸತ್ವ ರಜೋಗುಣತಮೋಗುಣಗಳು ಸೃಷ್ಟಿಕಾರ್ಯಮಾಡಲೆಂಬ ಆಜ್ಞಾರೂಪವಾದ ಕಟ್ಟಳೆಯ ದೃಷ್ಟಿಯ ಸ್ವರೂಪದುದೇ ಈಶ್ವರ ಈಶ್ವರಿಯರ ಈಕ್ಷಣದ ತತ್ವವಾಗಿದೆ. ಆದುದರಿಂದ ಈಕ್ಷಣವೆ ಪ್ರಜ್ಞಾನೇತ್ರದ ತತ್ವವಾಗಿದೆ.

ಮಲಿನ ಸತ್ವರಜಸ್ತಮೋಗುಣಗಳು ಸೃಷ್ಟಿಕಾರ್ಯ ಮಾಡಿದರೂ ತಾವೇ ಸ್ವತಂತ್ರರಲ್ಲ. ಪ್ರಜ್ಞಾನ ರೂಪವಾದ ಈಶ್ವರ ಈಶ್ವರಿಯರ ಆಶ್ರಯದಲ್ಲೇ ಇರುವುದನ್ನು

ಸೂಚಿಸುವಿಕೆಯೆ ಪ್ರಜ್ಞಾನೇ ಪ್ರತಿಷ್ಠಿತಂ ಎಂಬುದರ ತತ್ವವಾಗಿದೆ. ಪ್ರಜ್ಞಾನೇ ತ್ರೈಲೋಕಃ ಎಂಬುದರ ತತ್ವವೇನೆಂದರೆ–' ಈಕ್ಷಣಾದಿ ಪ್ರವೇಶಾಂತಾ ಸೃಷ್ಟಿರೀಶೇನಕಲ್ಪಿತಾ' ಎಂಬ ಶ್ರುತಿವಾಕ್ಯದಲ್ಲಿರುವ ಈಕ್ಷಣ ಪದದ ತತ್ವವು ಬಂದಿತು; ಪ್ರವೇಶ ಎಂಬುದರ ತತ್ವವೇನೆಂದರೆ ಈಶ್ವರ ಈಶ್ವರಿಯರು ಸೃಷ್ಟಿಸಿದ ಜಗತ್ತಿನಲ್ಲಿ ಅಂತರ್ಯಾಮಿ ರೂಪದಿಂದ ವ್ಯಾಪಿಸಿರುವಿಕೆಯೆ ಪ್ರಜ್ಞಾನೇತ್ರೈಲೋಕಃ ಎಂಬುದರ ತತ್ವವಾಗಿದೆ. ಅಂದರೆ ಪ್ರಜ್ಞಾರೂಪವಾದ ಜ್ಞಾನಶಕ್ತಿಯೂ ಈಶ್ವರ ಚೈತನ್ಯನೂ ಜಗತ್ತನ್ನೆಲ್ಲಾ ಅಂತರ್ಯಾಮಿಯಾಗಿ ವ್ಯಾಪಿಸಿ ವಶದಲ್ಲಿ ಇಟ್ಟುಕೊಂಡಿರುವ ತತ್ವವಾಗಿದೆ. ಇದನ್ನು ಗೀತಾವಾಕ್ಯ 'ಈಶ್ವರಸ್ಸರ್ವಭೂತಾನಾಂ ಹೃದ್ದೇಶೇ ಅರ್ಜುನ ತಿಷ್ಠತಿ' ಎಂಬುದು ಸಮರ್ಥಿಸುವುದು. ಅಲ್ಲದೆ 'ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿಮಾಯಯಾ' ಎಂಬ ಗೀತಾ ವಾಕ್ಯದ ತತ್ವಕ್ಕೆ ಅನುಸಾರವಾಗಿ ಈಶ್ವರ ಈಶ್ವರಿಯರು ಸಕಲ ಪ್ರಾಣಿಗಳಿಗೂ ಒತ್ತಾಸೆಯಾಗಿ ಜಗತ್ತನ್ನು ನಡೆಸುವಿಕೆಯೆ ಪ್ರಜ್ಞಾಪ್ರತಿಷ್ಠಾ ಎಂಬುದರ ತತ್ವವಾಗಿದೆ.

ಪ್ರಜ್ಞಾನಂ ಬ್ರಹ್ಮ ಎಂಬುದರ ತತ್ವವೇನೆಂದರೆ—"ಈಕ್ಷಣಾದಿ ಪ್ರವೇಶಾಂತಾ ಸೃಷ್ಟಿರೀಶೇನ ಕಲ್ಪಿತಾ" ಎಂಬ ಶ್ರುತಿವಾಕ್ಯದಲ್ಲಿನ ಈಕ್ಷಣ ಮತ್ತು ಪ್ರವೇಶ ಎಂಬುವುಗಳ ತತ್ವಗಳನ್ನು ಮೇಲೆ ವಿವರಿಸಿತು. 'ಸೃಷ್ಟಿರೀಶೇನ ಕಲ್ಪಿತಾ' ಎಂಬುದರ ವಿಚಾರವನ್ನು ತಿಳಿದುಕೊಳ್ಳೋಣ. ಸೃಷ್ಟಿರೀಶೇನ ಕಲ್ಪಿತಾ ಎಂದರೆ ಸೃಷ್ಟಿಯು ಈಶ್ವರನಿಂದ ಕಲ್ಪಿಸಲ್ಪಟ್ಟಿತು ಎಂದು ಅರ್ಥ. ಕಲ್ಪಿಸಲ್ಪಟ್ಟಿತು ಎಂದರೆ ಇಂದ್ರಜಾಲದಂತೆ ಕೃತಕವಾದುದೇ ಹೊರತು ಶಾಶ್ವತವಾಗಿ ಇರುವುದಿಲ್ಲ. ಆದುದರಿಂದ ಜಗತ್ತು ಮಿಥ್ಯವಾದುದು. ಪರಬ್ರಹ್ಮವು ಯಾವಾಗಲೂ ಯಾವ ವ್ಯತ್ಯಾಸವೂ ಹೊಂದದೆ ಇರುವುದರಿಂದ ಸತ್ಯವಾದುದು. ಜಗತ್ತಿನ ರೂಪವು ಮಿಥ್ಯ. ಜಗತ್ತಿನ ಶಕ್ತಿ ಮಿಥ್ಯವಲ್ಲ. ಶಕ್ತಿಗೆ ರೂಪವಿಲ್ಲ. ಅಂದರೆ ಭೂಮಿ ಕರಗಿ ನೀರಾಗಿ ನೀರು ಅಗ್ನಿಯಾಗಿ ಅಗ್ನಿ ವಾಯುವಾಗಿ ವಾಯುವು ಆಕಾಶವಾಗಿ ಆಕಾಶವು ಶಕ್ತಿಯಲಿ ಅಡಗುವುದು. ಶಕ್ತಿಯು ಪರಬ್ರಹ್ಮಸ್ವರೂಪವಾಗುವುದು. ಅಂದರೆ ತಮೋಗುಣಕ್ಕೆ ಸ್ಥೂಲರೂಪವನ್ನು ಕಲ್ಪಿಸಿಕೊಳ್ಳುವ ಶಕ್ತಿ ಇದೆ. ಸ್ಥೂಲರೂಪವು ಬೆಳವಣಿಗೆಯಾಗಲು ರಜೋಗುಣವು ತಮೋಗುಣಕ್ಕೆ ಸಹಾಯಕವಾಗುವುದು. ಲಯಕಾಲದಲ್ಲಿ ಪ್ರಜ್ಞಾನವೆಂದರೆ ಶುದ್ಧಸತ್ವ ಗುಣವು ರಜಸ್ತಮೋಗುಣ ಶಕ್ತಿಗಳನ್ನು ತನ್ನಲ್ಲಿ ಅಡಗಿಸಿಕೊಳ್ಳುವುದು. ಈಶ್ವರ ಈಶ್ವರಿಯರು ಒಂದಾಗುವಿಕೆಯೆ ಪರಬ್ರಹ್ಮದ ಸ್ಥಿತಿ. ಅಂದರೆ ಪ್ರಜ್ಞಾನವು ಪರಬ್ರಹ್ಮವಾಗುವಿಕೆಯೆ ಆಗಿದೆ. ಪರಬ್ರಹ್ಮ ಒಂದೇ ಇದ್ದಾಗ ಪ್ರಜ್ಞಾನವೆನಿಸುವುದಿಲ್ಲ. ಪ್ರಕೃಷ್ಟವೆಂಬ ವಿಶೇಷಣ ಬ್ರಹ್ಮನಲ್ಲಿ ಇಲ್ಲ. ಜ್ಞಾನಮಾತ್ರಸ್ವರೂಪನೆನಿಸುವುದು. ಇದೇ ಪ್ರಜ್ಞಾನಂ ಬ್ರಹ್ಮ ಎಂಬುದರ ತತ್ವವಾಗಿದೆ.

ಮೇಲೆ ವಿವರಿಸಿರುವ ತತ್ವಗಳೆಲ್ಲಾ ಬ್ರಹ್ಮಾಂಡಕ್ಕೆ ಸೇರಿದುದು. ಪಿಂಡಾಂಡವಾದ ಮನುಷ್ಯನಲ್ಲೂ ಅವಿದ್ಯಾನಿವೃತ್ತಿಯಾಗಿ ಪ್ರಜ್ಞಾನದ ಸೋಪಾನಕ್ಕೆ ಬಂದು ನಂತರ ಪ್ರಜ್ಞಾನವು ಪರಬ್ರಹ್ಮವಾಗುವಿಕೆಯ ವಿಚಾರಗಳನ್ನು ನಾಲಕ್ಕು ವೇದಗಳ ಮಹಾವಾಕ್ಯಗಳ ತತ್ವದಲ್ಲಿ ಹಿಂದೆ ವಿವರಿಸಿಯೆ ಇರುವುದು. ವಾಮದೇವನು ಇದೇ ರೀತಿಯಾಗಿ ಪ್ರಜ್ಞಾನದ ಮೂಲಕ ಅಮೃತತ್ವವನ್ನು ಪಡೆದನೆಂದು ಐತರೇಯೋಪನಿಷತ್ತಿನ ಕೊನೆಯ ಮಂತ್ರವು ತಿಳಿಸುವುದು.

## ವೇದದ ನಾಲಕ್ಕು ಮಹಾವಾಕ್ಯಗಳ ತತ್ವವಿಚಾರದಿಂದ ಹೊರಪಡುವ ಸ್ವಾರಸ್ಯವಾದ ವಿಚಾರ.

ನಾಲಕ್ಕು ವೇದಗಳ ಮಹಾ ವಾಕ್ಯಗಳಾದ ಪ್ರಜ್ಞಾನಂ ಬ್ರಹ್ಮಾ ಅಹಂ ಬ್ರಸ್ಮಿ, ತತ್ವಮಸಿ, ಅಯಮಾತ್ಮಾ ಬ್ರಹ್ಮ ಈ ನಾಲ್ಕರ ತತ್ವಗಳನುಸಾರವಾಗಿರುವ ಮೋಕ್ಷಮಾರ್ಗದ ವಿಚಾರವನ್ನು ಇದುವರೆಗೂ ವಿವರಿಸಿತಷ್ಟೆ. ಅಲ್ಲದೆ ವೇದ ಎಂದರೆ ಏನು, ಇದಕ್ಕೆ ಮೂಲವಾವುದು, ಈ ಮಹಾವಾಕ್ಯಗಳಿರಲು ಕಾರಣವೇನು ಎಂಬ ವಿಚಾರಗಳನ್ನು ಪೀಠಿಕೆಯಲ್ಲಿ ಕೊಂಚ ವಿವರಿಸಿದೆ. ಆದರೂ ಇಲ್ಲೂಕೊಂಚ ವಿವರಣೆ ಇರುವುದು ಉತ್ತಮವಾಗಿರುವುದರಿಂದ ಬರೆದಿರುವುದು. ವೇದವೆಂದರೆ ಜ್ಞಾನ, ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಲಯಗಳ ಸಕಲ ಜ್ಞಾನವೇ ವೇದವೆನಿಸಿ ಇದು ಮೂಲತಃ ಪರಬ್ರಹ್ಮನಲ್ಲಿ ಅವ್ಯಕ್ತವಾಗಿ ಅಡಗಿದ್ದು ಜಗತ್ತಿನ ಸೃಷ್ಟಿ ಕಾಲದಲ್ಲಿ ಪರಾಶಕ್ತಿಯೂ ವೇದಮಾತೆಯೂ ಆದ ಶ್ರೀ ಗಾಯತ್ರೀ ದೇವಿಯಿಂದ ವ್ಯಕ್ತರೂಪವನ್ನು ಪಡೆಯುವುದು. ವ್ಯಕ್ತವಾದ ಈ ಜ್ಞಾನ ಭಂಡಾರವನ್ನು ಶ್ರೀ ಸರಸ್ವತೀದೇವಿಯು ಪುಸ್ತಕ ರೂಪದಲ್ಲಿ ತನ್ನ ಹಸ್ತದಲ್ಲಿ ಧರಿಸಿದಳು. ಈ ಪುಸ್ತಕದಲ್ಲಿ ಅಡಗಿರುವ ವೇದ ಭಂಡಾರದ ಕೆಲವು ಭಾಗಗಳನ್ನು ಜಗದೀಶ್ವರನು ಮನುಷ್ಯರ ಕಲ್ಯಾಣಕ್ಕೋಸ್ಕರ ಅಗ್ನಿ ವಾಯು, ಸೂರ್ಯ, ಆಂಗೀರಸರ ಅಂಶದ ನಿತ್ಯಮುಕ್ತರಾದ ಮಹರ್ಷಿಗಳಿಂದ ವೇದಮಂತ್ರಗಳನ್ನು ಹೊರಗೆಡವಿಸಿದನು.

ಹೀಗೆ ಅವತಾರ ಪುರುಷರುಗಳಿಂದ ಗಾನರೂಪವಾಗಿ ಹೊರಪಡಿಸಿದ ವೇದ ಮಂತ್ರಗಳನ್ನು ಶ್ರೀ ಮಹಾವಿಷ್ಣುವಿನ ಅವತಾರವಾಗಿ ವಿಷ್ಣುರೂಪರೆನಿಸಿದ ಶ್ರೀ ವ್ಯಾಸ ಮಹರ್ಷಿಗಳು ಮನುಷ್ಯರ ಉದ್ಧಾರಕ್ಕೋಸ್ಕರ ಋಗ್, ಯಜು, ಸಾಮ, ಅಥರ್ವಣವೆಂಬ 4 ಭಾಗಗಳಾಗಿ ವಿಂಗಡಿಸಿ ಆಯಾಯ ವೇದ

ಮುಖ್ಯಸಾರವನ್ನೊಳಗೊಂಡ ಅಮೃತರೂಪವಾದ ಮಹಾವಾಕ್ಯಗಳೆನಿಸುವ ಪ್ರಜ್ಞಾನಂ ಬ್ರಹ್ಮ, ಅಹಂ ಬ್ರಹ್ಮಾಸ್ಮಿ, ತತ್ವಮಸಿ, ಅಯಮಾತ್ಮಾಬ್ರಹ್ಮ ಎಂಬುವುಗಳನ್ನು ಹೊರಗೆಡವಿದರು. ಇದರಿಂದ ಅವರಿಗೆ ಶ್ರೀ ವೇದವ್ಯಾಸರೆಂಬ ಹೆಸರು ಇದೆ. ಪ್ರಜ್ಞಾನಂ ಬ್ರಹ್ಮ ಮುಂತಾದವುಗಳಿಗೆ ಮಹಾವಾಕ್ಯಗಳೆಂದು ಹೆಸರು ಬರಲು ಕಾರಣವೇನೆಂದರೆ ಇದಕ್ಕೆ ಸಮಾನವಾದ ಜ್ಞಾನದ ಮಹತ್ವುಳ್ಳ ವಾಕ್ಯಗಳು ಮತ್ತೊಂದು ಇಲ್ಲವಾದ್ದರಿಂದ ಈ ವಾಕ್ಯಗಳಿಗೆ ಮಹಾವಾಕ್ಯಗಳೆಂದು ಹೆಸರು ಬಂದಿವೆ. ಅಮೃತರೂಪವಾದುದೆಂದರೆ ಮುಕ್ತಿಗೆ ಕಾರಣವಾಗಿರುವ ಬ್ರಹ್ಮಜ್ಞಾನವನ್ನು ಉಂಟುಮಾಡುವವುಗಳಾದ್ದರಿಂದ ಅಮೃತರೂಪವಾದುದು. ಅಲ್ಲದೆ "ನಾನು" ಎಂಬ ಜ್ಞಾನವೂ ಅಮೃತವಾದುದು. ಬ್ರಹ್ಮ ಎಂಬುವುದರ ಜ್ಞಾನವೂ ಅಮೃತವಾದುದು. ಇವೆರಡನ್ನೂ ಸೇರಿಸುವ ಪ್ರಜ್ಞಾನವೂ ಅಮೃತವಾದುದು. ಆದ್ದರಿಂದ ಮಹಾವಾಕ್ಯಗಳು ಅಮೃತರೂಪವಾದುವುಗಳು, ಅಲ್ಲದೆ ಪ್ರಪಂಚ ವ್ಯಾಪಾರದಲ್ಲಿ ಅಮೃತಪ್ರಾಯವಾದ ಧರ್ಮದ ನಡೆವಳಿಕೆಯನ್ನು ಈ ಮಹಾವಾಕ್ಯಗಳು ಉಂಟುಮಾಡಿಕೊಡುವುದರಿಂದ ಅಮೃತರೂಪವಾದುವುಗಳು. ಜೀವನ್ಮುಕ್ತಿ ಸ್ಥಿತಿಯಲ್ಲಿ ಅಮೃತಮಯವಾದ ಆನಂದ ಮಗ್ನತೆಯ ಉನ್ಮನೀ ಭಾವವನ್ನು ಮಹಾವಾಕ್ಯಗಳು ಉಂಟುಮಾಡಿಕೊಡುವುದರಿಂದ ಅಮೃತರೂಪವಾದುವುಗಳು. ಮೋಕ್ಷದಲ್ಲಿ ಅಮೃತರೂಪನಾದ ಪರಮಾತ್ಮನಲ್ಲಿ ಅಮೃತರೂಪನಾದ ಜೀವನು ಸೇರಿಹೋಗುವ ಕಾಲದಲ್ಲಿ ಮಹಾವಾಕ್ಯಗಳ ತತ್ವವಾದ ಪ್ರಜ್ಞಾನವೂ ಅಮೃತರೂಪವಾಗುವುದರಿಂದ ಮಹಾವಾಕ್ಯಗಳು ಅಮೃತರೂಪವಾದವುಗಳು. ವೇದಗಳೇ ಅಮೃತರೂಪವೆಂದು ತೈತ್ತಿರೀಯೋಪನಿಷತ್ ಶಿಕ್ಷಾ ವಲ್ಲಿಯಲ್ಲಿ

'ಛನ್ದೋಭ್ಯೋಽಧ್ಯಮೃತಾತ್ ಸಂಬಭೂವ'

ಛಂದಸ್ಸೆಂದರೆ ವೇದಗಳೆಂಬ ಅಮೃತದಿಂದ ಉಂಟಾಗಿರುವುದು ಎಂದು ಅರ್ಥ. ವೇದಗಳೇ ಅಮೃತರೂಪವೆಂದರೆ ನಾಶವಿಲ್ಲದವುಗಳೆಂದು ಇರುವಾಗ ವೇದಗಳ ಸಾರಭೂತವಾದ ಮಹಾವಾಕ್ಯಗಳು ನಿಸ್ಸಂದೇಹವಾಗಿ ಅಮೃತರೂಪಗಳಾಗಿರುತ್ತವೆ. ವೇದಗಳ ಮಹಾವಾಕ್ಯಗಳನ್ನು ಅಸ್ತಿಭಾರವಾಗಿಟ್ಟುಕೊಂಡು ಜ್ಞಾನಿಗಳಾದ ಮಹರ್ಷಿಗಳು ಉಪನಿಷತ್ತುಗಳನ್ನು ರಚಿಸಿರುತ್ತಾರೆ. ವೇದಾಂತಕ್ಕೆ ಮಹಾವಾಕ್ಯಗಳ ಮೂಲರೂಪವಾಗಿಯೂ ಆಧಾರವಾಗಿಯೂ ಇರುತ್ತವೆ.

ಈ ಸಂದರ್ಭದಲ್ಲಿ ಒಂದು ಅತ್ಯಂತ ಶೋಚನೀಯವಾದ ವಿಚಾರವನ್ನು ಇಲ್ಲಿ ತಿಳಿಸಬೇಕಾಗಿದೆ. ಉಪನಿಷತ್ತಿನಲ್ಲಿರುವ ಸಾಮವೇದದ ಮಹಾವಾಕ್ಯವಾದ

'ತತ್ವಮಸಿ' ಎಂಬುದನ್ನು ಶ್ರೀ ಮಧ್ವಾಚಾರ್ಯರು ಅತತ್ವಮಸಿ ಎಂದು ಬದಲಾಯಿಸಿ ಪ್ರಚಾರಮಾಡಿರುತ್ತಾರೆ. ಅಲ್ಲದೆ ಸಾಯುಜ್ಯಮುಕ್ತಿ ಎಂಬುದು ಇಲ್ಲ. ಸಾಮೀಪ್ಯ ಮುಕ್ತಿಯೆ ನಿಜವಾದುದೆಂದೂ ಪ್ರಚಾರಮಾಡಿರುತ್ತಾರೆ. ತತ್ವಮಸಿ ಪದಕ್ಕೆ ತ್ವಂ – ನೀನು, ತತ್ –ಆಪರಬ್ರಹ್ಮವೆ, ಅಸಿ–ಆಗಿರುತ್ತೀಯೆ ಎಂಬುದು ನಿಜವಾದ ಅರ್ಥ. ಅತತ್ವಮಸಿ ಎನ್ನುವುದಕ್ಕೆ ತ್ವಂ –ನೀನು, ಅತತ್ವಮಸಿ– ಪರಬ್ರಹ್ಮನಲ್ಲ ಎಂದು ಅರ್ಥವಾಗುವುದು. ತತ್ವಮಸಿಯೆಂದರೆ ಆ ಪರಬ್ರಹ್ಮವೇ ನೀನು ಎಂಬ ಅಸ್ತಿಭಾರದ ಮೇಲೆಯೆ ಆತ್ಮತತ್ವ ವಿಚಾರಗಳು ಪ್ರಾರಂಭವಾಗಿ ಮುಂದಕ್ಕೆ ಅಹಂಬ್ರಹ್ಮಾಸ್ಮಿ ಪ್ರಜ್ಞಾನಂಬ್ರಹ್ಮ ಅಯಮಾತ್ಮಾಬ್ರಹ್ಮ ಎಂಬುವುಗಳು ಬರುವ ವಿಚಾರಗಳನ್ನು ಹಿಂದೆ ವಿವರವಾಗಿ ತಿಳಿಸಿರುತ್ತಷ್ಟೆ. ತತ್ವಮಸಿಯನ್ನು ಅತತ್ವಮಸಿ ಮಾಡಿದರೆ ಮುಂದಿನ ಮಹಾವಾಕ್ಯಗಳ ಕಾರ್ಯಗಳೇ ಇಲ್ಲದುತಾಗುವುದು. ಇದರಿಂದ ಮುಂದಿನ ಅಹಂ ಬ್ರಹ್ಮಾಸ್ಮಿ, ಪ್ರಜ್ಞಾನಂ ಬ್ರಹ್ಮ, ಅಯಮಾತ್ಮಾಬ್ರಹ್ಮ ಎಂಬ ವೇದದ ಮಹಾವಾಕ್ಯಗಳು ಅಪ್ರಯೋಜಕವಾದವುಗಳೆಂದು ಶ್ರೀ ಮಧ್ವಾಚಾರ್ಯರು ಅಭಿಪ್ರಾಯ ಪಟ್ಟಂತಾಯಿತು. ಅಲ್ಲದೆ ಮಹಾವಿಷ್ಣುರೂಪರೆ ಆದ ಶ್ರೀ ವೇದವ್ಯಾಸರ ಮತ್ತು ಇತರ ಮಹರ್ಷಿಗಳ ವಚನಕ್ಕೆ ಬೆಲೆ ಇಲ್ಲದಂತೆಯೆ ಆಯಿತು.

ಮುಕ್ತಿಯ ವಿಚಾರವನ್ನು ಕೊಂಚ ವಿಮರ್ಶಿಸೋಣ. ಮುಕ್ತಿಕೋಪನಿಷತ್ತಿನಲ್ಲಿ ಶ್ರೀ ರಾಮಚಂದ್ರನು ಆಂಜನೇಯನಿಗೆ "ಸಾಲೋಕ್ಯಾದಿ ವಿಭಾಗೇನ ಚತುರ್ಥಾ ಮುಕ್ತಿರೀರಿತಾ" ಅಂದರೆ ಮುಕ್ತಿಯಲ್ಲಿ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯವೆಂಬ ನಾಲಕ್ಕು ಭಾಗಗಳಿವೆ ಎಂದು ಹೇಳಿರುವನು. ಈ ವಿಚಾರಗಳನ್ನು ಮಹಾವಾಕ್ಯಗಳ ತತ್ವಗಳಲ್ಲಿ ತಿಳಿಸಿರುವ ಮೋಕ್ಷದ ಸೋಪಾನಕ್ಕೆ ಅನ್ವಯಿಸೋಣ. ಮಹಾವಾಕ್ಯಗಳ ಯಜುರ್ವೇದದ ತತ್ವದಲ್ಲಿ ಧ್ಯಾನಾನುಷ್ಠಾನದ ಕ್ರಮದಲ್ಲಿ ಅಂತರ್ಮುಖದಲ್ಲಿ ತೇಜೋಬಿಂದುವನ್ನು ಧರಿಸಿ ಧ್ಯಾನಮಾಡಲ್ಪಡುವುದಷ್ಟೆ. ನಾನು ಎಂಬ ಜ್ಞಾನವು ಹೊರಗಡೆ ಲೋಕವ್ಯವಹಾರದ ಜ್ಞಾನದಲ್ಲಿ ಇತ್ತು. ಈಗ ಧ್ಯಾನದಲ್ಲಿ ತೇಜೋಬಿಂದು ಧಾರಣೆಯ ಸ್ಥಿತಿಯಲ್ಲಿ ಅಂತರ್ಮುಖದಲ್ಲಿರುವುದರಿಂದ ಇದು ಸಾಲೋಕ್ಯಮುಕ್ತಿ. ಅಂತರ್ಮುಖದ ಸ್ಥಳವು ಸಾ –ಆ ಪರಮಾತ್ಮನ ಲೋಕವಾದ್ದರಿಂದ ಸಾಲೋಕ್ಯವು. ಮುಕ್ತಿಯೆಂದರೆ ಬಿಡಿಸಿಕೊಳ್ಳುವಿಕೆ ನಾನು ಎಂಬ ಜ್ಞಾನವು ಅಂತರ್ಮುಖದ ಧ್ಯಾನದಲ್ಲಿ ತೇಜೋಬಿಂದು ಸೋಪಾನದಲ್ಲಿ ನಿಂತಿತಾದ್ದರಿಂದ ಬಾಹ್ಯಲೋಕವ್ಯವಹಾರದಿಂದ ಬಿಡಿಸಿಕೊಂಡು ಅಂತರ್ಮುಖದಲ್ಲಿರುವ ಪರಮಾತ್ಮ ಲೋಕವೆನಿಸುವ ಸುಷುಮ್ನಾ ನಾಡಿಯಲ್ಲಿ ನಿಂತಿರುವುದೆಂಬ ತಾತ್ಪರ್ಯ. ಆದುದರಿಂದ ನಾನು ಎಂಬ ಜ್ಞಾನವು ಬಾಹ್ಯಜ್ಞಾನದಿಂದ ಬಿಡಲ್ಪಟ್ಟು ಅಂತರ್ಮುಖದ ತೇಜೋರೂಪಿನಲ್ಲಿ ನೆಲೆಸುವಿಕೆಯೆ ಸಾಲೋಕ್ಯಮುಕ್ತಿಯ ತತ್ವವಾಗಿರುವುದು. ಸಾಮೀಪ್ಯ ಮುಕ್ತಿಯೆಂದರೆ

ಧ್ಯಾನದಲ್ಲಿ ಬಿಂದು ಸೋಪಾನದಿಂದ ಮೇಲಕ್ಕೆ ಹತ್ತಿದರೆ ಓಂಕಾರ ನಾದದ ಸೋಪಾನವು ಲಭ್ಯವಾಗುವುದು. ಈ ಸೋಪಾನವು ಪರಮಾತ್ಮ ಸ್ಥಿತಿಗೆ ಹತ್ತಿರವಾದುದರಿಂದ ಸಾಮೀಪ್ಯಮುಕ್ತಿಯೆನಿಸುವುದು.

ಓಂಕಾರನಾದದ ಸೋಪಾನದಿಂದಲೂ ಮೇಲಕ್ಕೆ ಹತ್ತಿದರೆ ಕಲಾಸೋಪಾನವು ಲಭಿಸುವುದು. ಈ ಸೋಪಾನವು ಪ್ರಜ್ಞಾನದ ಸ್ಥಿತಿಯಾಗಿರುವುದು. ಅಂದರೆ ಅಖಂಡವಾದ ಆನಂದಮಯವಾದ ನಾನು ಎಂಬ ಜ್ಞಾನದ ಸ್ಥಿತಿ. ಬಿಂದು ನಾದಗಳ ಸೋಪಾನದಲ್ಲಿದ್ದ ನಾನು ಎಂಬ ಜ್ಞಾನವು ಅಖಂಡಾಕಾರವಾದ ಆನಂದಮಯವಾದ ನಾನು ಎಂಬ ಪ್ರಜ್ಞಾನದ ಸ್ಥಿತಿಗೆ ಬಂದು ನಿಂತಿದೆ. ಇದು ಸಾರೂಪ್ಯಮುಕ್ತಿಯ ಸ್ಥಿತಿ. ಸಾರೂಪ್ಯವೆಂದರೆ ಸಮಾನರೂಪ. ಪರಬ್ರಹ್ಮನು ಜ್ಞಾನರೂಪ. ಪ್ರಜ್ಞಾನವೂ (ನಾನು ಎಂಬುದು)ಅಖಂಡ ಜ್ಞಾನರೂಪವಾದುದರಿಂದ ಸಾರೂಪ್ಯದ ಸ್ಥಿತಿ. ಮಹಾವಾಕ್ಯಗಳ ತತ್ವದಲ್ಲಿ ಇದನ್ನು ವಿವರವಾಗಿ ತಿಳಿಸಿದೆ. ಸಾಯುಜ್ಯದ ತತ್ವವೇನೆಂದರೆ ಯುಜು ಎಂದರೆ ಸೇರುವಿಕೆ. ಪ್ರಜ್ಞಾನವು ಪರಬ್ರಹ್ಮನಲ್ಲಿ ಸೇರಿಹೋಗುವಿಕೆ. ಅಂದರೆ ಅಖಂಡಾಕಾರ[illegible] ನಾನು ಎಂಬ ಜ್ಞಾನವು ಜ್ಞಾನಮಾತ್ರ ರೂಪವಾಗಿರುವ ಪರಬ್ರಹ್ಮನಲ್ಲಿ ಸೇರಿಹೋಗುವಿಕೆಯೆ ಸಾಯುಜ್ಯಮುಕ್ತಿ. ಮೇಲಿನ ವಿವರಣೆಗಳೇ ನಿಸ್ಸಂದೆಹವಾಗಿ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯದ ತತ್ವಗಳಾಗಿವೆ. ಹೀಗ್ತೆ ದೇಹದೊಳಗಡೆಯೆ ಪರಮಾತ್ಮಸ್ಥಿತಿಯನ್ನು ಹೊಂದಬೇಕೆಂದು ಮುಕ್ತಿಕೋಪನಿಷತಿನಲ್ಲಿ ಶ್ರೀರಾಮಚಂದ್ರನು ಮಾರುತಿಗೆ ಉಪದೇಶಿಸಿರುವುದೇನೆಂದರೆ—

ಬಹುಶಾಸ್ತ್ರ ಕಥಾಕಂಥಾರೋಮಂಥೇನ ವೃಥೈವಕಿಂ।
ಅನ್ವೇಷ್ಟವ್ಯಂ ಪ್ರಯತ್ನೇನ ಮಾರುತೇ ಜ್ಯೋತಿರಾನ್ತರಂ॥

ಅರ್ಥ॥ ಎಲೈಮಾರುತಿಯೆ! ಶಾಸ್ತ್ರಗಳ ಕಂತೆಗಳನ್ನು ಎಷ್ಟಾವರ್ತಿ ತಿರುವಿಹಾಕಿದರೂ ಪ್ರಯೋಜನವಿಲ್ಲ. ಬಹು ಪ್ರಯತ್ನದಿಂದ ನಿನ್ನಲ್ಲಿರುವ ಅಂತರ್ಜ್ಯೋತಿ ಸ್ವರೂಪನಾದ ಪರಮಾತ್ಮನನ್ನು ಹುಡುಕಿ ಹೊಂದು ಎಂದು ಉಪದೇಶಿಸಿರುವನು. ಶ್ರೀರಾಮಚಂದ್ರನು ಆಂಜನೇಯನಿಗೆ ಮುಕ್ತಿಯ ನಾಲಕ್ಕು ಭೇದಗಳನ್ನು ತಿಳಿಸಿ ಅಂತರ್ಜ್ಯೋತಿಯಲ್ಲಿ ಪ್ರವೇಶಿಸುವುದೇ ಮುಖ್ಯಗುರಿಯಾಗಿರಬೇಕೆಂಬುದನ್ನು ತಿಳಿಸಿದುದಲ್ಲದೆ "ಕೈವಲ್ಯಮುಕ್ತಿರೇಕ್ವೈವ ಪಾರಮಾರ್ಥಿಕರೂಪಿಣೀ" ಎಂದರೆ ಜೀವನು ಪರಬ್ರಹ್ಮನಲ್ಲಿ ಅಭೇದದಿಂದ ಒಂದಾಗುವ ಕೈವಲ್ಯಮುಕ್ತಿಯೊಂದೇ ಪಾರಮಾರ್ಥಿಕವಾದುದು ಎಂದು ಹೇಳಿರುವಾಗ ಇತರ ಮುಕ್ತಿಗಳೆಂಬುದು ಗೌಣವಾದವುಗಳು. ಶ್ರೀ ಕೃಷ್ಣಪರಮಾತ್ಮನ ಗೀತಾದಲ್ಲಿ ಬ್ರಹ್ಮಲೋಕ ಮೊದಲುಗೊಂಡು ಯಾವಲೋಕಕ್ಕೆ ಹೋದರೂ ಪುನ

ರ್ಜನ್ಮವುಂಟು. ನನ್ನನ್ನು ಸೇರಿದರೆ ಪುನರ್ಜನ್ಮವಿಲ್ಲ ಎಂದು ಹೇಳಿರುತ್ತಾನೆ. ಇದಕ್ಕೆ ಕೆಲವರು ವೈಕುಂಠ ಲೋಕಕ್ಕೆ ಹೋಗಿ ಶ್ರೀಮನ್ನಾರಾಯಣನ ಸನ್ನಿಧಿಯಲ್ಲಿದ್ದರೆ ಪುನರ್ಜನ್ಮ ಇಲ್ಲವೆಂದು ಅಭಿಪ್ರಾಯಪಡುತ್ತಾರೆ. ವೈಕುಂಠ ಲೋಕಕ್ಕಾಗಲೀ, ಕೈಲಾಸಕ್ಕಾಗಲೀ, ಬ್ರಹ್ಮಲೋಕಕ್ಕಾಗಲಿ ಹೋಗುವುದಕ್ಕೂ ಅರ್ಹತೆಬೇಕು. ನಮ್ಮ ಸ್ಥೂಲ ದೇಹದೊಡನೆ ಪ್ರವೇಶಿಸುವುದಕ್ಕಾಗುವುದಿಲ್ಲ. ಸೂಕ್ಷ್ಮದೇಹದಲ್ಲಿ ಹೋಗಬೇಕು. ವೈಕುಂಠ ಕೈಲಾಸಗಳಿಗೆ ಹೋಗಿ ನೆಲೆಸುವುದು ನಾನು ಎಂಬ ಜ್ಞಾನ. ಈ ನಾನು ಎಂಬ ಜ್ಞಾನವು ನಮ್ಮ ಸೂಕ್ಷ್ಮದೇಹದಲ್ಲಿ ಅಜ್ಞಾನದ ಬಂಧನದಲ್ಲಿದೆ. ಈ ಅಜ್ಞಾನವು ಜನ್ಮ ಮರಣಗಳನ್ನು ಉಂಟುಮಾಡುವ ದೇಹಗಳನ್ನು ಕೊಟ್ಟು ಬಂಧಿಸಿರುವುದರಿಂದ ಅಜ್ಞಾನದ ಬಂಧನ ನಿವೃತ್ತಿಯಾದಲ್ಲದೆ ವೈಕುಂಠ, ಕೈಲಾಸ ಚತುರ್ಮುಖ ಬ್ರಹನ ಲೋಕಕ್ಕೆ ಖಂಡಿತಾ ಪ್ರವೇಶಿಸಲು ಆಗುವುದಿಲ್ಲ. ಈ ಲೋಕಗಳಿಗೆ ಹೋಗಿ ನೆಲಸಿರುವವರು ಅಜ್ಞಾನ ಬಂಧನ ಪರಿಹರಿಸಿಕೊಂಡು ನಿತ್ಯಮುಕ್ತರಾಗಿರುವವರೇ ಆಗಿರುತ್ತಾರೆ. ದೇವತೆಗಳಲೋಕ (ಸ್ವರ್ಗ)ಕ್ಕೆ ಮಾತ್ರ ಅಜ್ಞಾನವಿದ್ದರೂ ಸೂಕ್ಷ್ಮ ಶರೀರದಿಂದ ಹೋಗಿ ಪುಣ್ಯವಿದ್ದಷ್ಟು ಕಾಲಮಾತ್ರ ಅಲ್ಲಿದ್ದು ನಂತರ ಭೂಲೋಕಕ್ಕೆ ಇಳಿದು ಬರುವರು. ಆದುದರಿಂದ ಅಜ್ಞಾನವನ್ನು ನರಜನ್ಮದಲ್ಲೇ [illegible]ರಿಹರಿಸಿಕೊಳ್ಳ ಬೇಕಾಗಿದೆ. ಅಜ್ಞಾನವನ್ನು ಪರಿಹರಿಸಿಕೊಳ್ಳಲು ವೇದಗಳ ನಾಲಕ್ಕು ಮಹಾವಾಕ್ಯಗಳ ತತ್ವಗಳನ್ನು ಆಚರಣೆಗೆ ತಂದುಕೊಂಡು ಕೃತಕೃತ್ಯರಾಗಬೇಕು.

ವೇದಗಳ ನಾಲಕ್ಕು ಮಹಾ ವಾಕ್ಯಗಳ ತತ್ವಗಳನ್ನು ತಿಳಿಯಲು ಅಂತರಂಗದಲ್ಲಿ ಪ್ರೇರೇಪಣೆಯಾಗಿ ಐತರೇಯೋಪನಿಷತ್ತಿನ ಕೆಲವು ಮಂತ್ರಗಳನ್ನು ಭಗವದ್ಗೀತೆಯ ಕೆಲವು ವಿಚಾರಗಳನ್ನು ಜೊತೆಗೂಡಿಸಿ ಪ್ರಜ್ಞಾನ ರೂಪಿಣಿಯಾದ ಜಗದಂಬೆಯು ನನಗೆ ಹೊಳೆಸಿದ ಮಟ್ಟಿಗೆ ಬರೆದಿರುವೆನು. ಆ ಜಗನ್ಮಾತೆಗೆ ನಮಸ್ಕರಿಸುತ್ತಾ ನನ್ನ ಬರವಣಿಗೆಯನ್ನು ಇಲ್ಲಿಗೆ ಪೂರ್ಣಮಾಡುವೆನು.



ವಿಚಾರ ಪ್ರಕಾಶನ: ನೆಲಮಂಗಲ—೫೬೨೧೨೩

ಎಡತೊರೆ ಸುಬ್ರಾಯಶರ್ಮರು ಹಳೆಯ ತಲೆಮಾರಿನ ವಿದ್ವಾಂಸರಲ್ಲಿ ಒಬ್ಬರು. ಬರವಣಿಗೆಯಲ್ಲಿ ಹೇಗೋ ಹಾಗೆ ನಡೆವಳಿಯಲ್ಲೂ ಸುಸಂಸ್ಕೃತ ರೀತಿಯಲ್ಲಿ ನಡೆದು ಕಾಲವಾದರು. ಇಂದು ಅವರು ಕಣ್ಣ ಮುಂದೆ ಇಲ್ಲದಿದ್ದರೂ ಅವರ ಜಿಜ್ಞಾಸೆ ಹಾಗೂ ಪಾರಂಪರಿಕವಾದ ಶ್ರದ್ಧೆ ಅವರಲ್ಲಿ ಅದ್ಭುತವಾಗಿತ್ತು.



ದಿವಂಗತ ಸುಬ್ರಾಯಶರ್ಮರ ಕೃತಿಗಳಲ್ಲಿ ಥಟ್ಟನೆ ಕಾಣುವ ಗುಣಧರ್ಮವೆಂದರೆ— ವೇದಾಂತ ವಿಚಾರದ ಬಗೆಗಿರುವ ಅನನ್ಯ ಶ್ರದ್ಧೆ ಮತ್ತು ಅವನ್ನು ಹೊಸ ಮತ್ತು ಹಳೆಯ ದೃಷ್ಟಿಕೋನದಿಂದ ನೋಡುವ ಭಾವುಕ ಭಕ್ತಿ.

ಈ ಕೃತಿ ಅವರ ಈ ಗುಣವನ್ನು ಶ್ರದ್ಧೆಯಿಂದ ಸೂಚಿಸುತ್ತದೆ ಮತ್ತು ಅವರ ವೈದುಷ್ಯವನ್ನು ಸಾರುತ್ತದೆ.

**ಪ್ರತಿಗಳಿಗೆ**–ಸಾಹಿತ್ಯಭಂಡಾರ, ನಂ-1,
ಜಂಗಮಮೇಸ್ತ್ರಿಗಲ್ಲಿ
ಬಳೇಪೇಟೆ
ಬೆಂಗಳೂರು-560056